ಲಕ್ಷ್ಮಣ್ ತೆಲಗಾವಿ

# ಚಿತ್ರದುರ್ಗ ರಾಜಾ ಮದಕರಿನಾಯಕನ ಗೌಡನಹಳ್ಳಿ ಶಾಸನ : ಮರು ಪರಿಶೀಲನೆ

ಬಿ. ಲೂಯಿ ರೈಸ್ ಅವರು ಪ್ರಕಟಿಸಿದ ಚಿತ್ರದುರ್ಗ ಜಿಲ್ಲೆಯ ಶಾಸನಗಳನ್ನು ಒಳಗೊಂಡ ಸಂಪುಟದಲ್ಲಿ,[1] ಚಿತ್ರದುರ್ಗ ನಾಯಕರಿಗೆ ಸಂಬಂಧಿಸಿದ ಸುಮಾರು ೪೮ ಶಾಸನಗಳಿವೆ. ಇದೇ ಜಿಲ್ಲೆಯ ಹಿರಿಯೂರು ತಾಲ್ಲೂಕಿಗೆ ಸೇರಿದ ಹಾಗೂ ಜವನಗೊಂಡನಹಳ್ಳಿ ಹೋಬಳಿ ಯಲ್ಲಿರುವ ಗೌಡನಹಳ್ಳಿ ಶಾಸನವು (ಸಂಖ್ಯೆ ೫೩) ಅವು ಗಳಲ್ಲೊಂದು. ಇದರ ಕಾಲ ಶಕ ೧೬೭೮ (ಕ್ರಿ. ಶ. ೧೭೫೬). ಇದು ದಾನಶಾಸನವಾಗಿದ್ದು, ಚಿತ್ರದುರ್ಗ ರಾಜ್ಯದ ಕೊನೆಯ ಅರಸ ರಾಜಾ ಮದಕರಿನಾಯಕನು (ಕ್ರಿ. ಶ. ೧೭೫೪-೧೭೭೯) ತನ್ನ ಹಿರಿಯರಿಗೆ ಪುಣ್ಯವಾಗ ಲೆಂದು ಹಿರಿಯೂರಿನಲ್ಲಿ ಅನ್ನಛತ್ರದ ಮಠವನ್ನು ಮಾಡಿಸಿ, ಅದನ್ನು ನಡೆಸಿಕೊಂಡು ಹೋಗಲು ಅದೇ ಸೀಮೆಯ ಗೌಡನಹಳ್ಳಿಯನ್ನು ಶಿವಾರ್ಪಿತವಾಗಿ ಕೊಟ್ಟಿರುವ ನೆಂಬುದೇ ಇಲ್ಲಿಯ ವಿಷಯ. ಈ ನಾಯಕರು ಈ ಬಗೆಯ ದಾನಶಾಸನಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಕೊಟ್ಟಿರುವ ರೆಂಬುದನ್ನು ಗಮನಿಸಬಹುದು.

ಈ ಶಾಸನ ಸಂಪುಟಕ್ಕೆ ಬರೆದ ಪೀಠಿಕೆಯಲ್ಲಿ, ಲೂಯಿ ರೈಸ್ ಅವರು, ಚಿತ್ರದುರ್ಗ ನಾಯಕರ ವಂಶಾ ನುಕ್ರಮಣಿಕೆಯನ್ನು ರಚಿಸಿ ಪ್ರಕಟಿಸಿರುವರು (ಪು. ೨೯). ಸಂಪುಟದಲ್ಲಿರುವ ಈ ನಾಯಕರನ್ನು ಕುರಿತ ಶಾಸನಗಳನ್ನು ಆಧರಿಸಿ ಈ ವಂಶಾವಳಿಯನ್ನು ರಚಿಸಿರುವುದಾಗಿಯೂ ಇದು ಅಷ್ಟು ಅಧಿಕೃತವಲ್ಲವೆಂತಲೂ ಅಲ್ಲಿಯೇ ಸೂಚನೆ ಸಹ ನೀಡಿರುವರು. ವಂಶಾನುಕ್ರಮಣಿಕೆಯಲ್ಲಿ ದುರ್ಗದ ಕಡೆಯ ಅರಸ ರಾಜಾ ಮದಕರಿನಾಯಕನು (ಶಾಸನದಲ್ಲಿ 'ರಾಜಾ ಮದಕೆರ್‍ರಿನಾಯಕ' ಎಂದಿದೆ) 'ದುಗಪ' (ಇಂಗ್ಲಿಷ್‌ನಲ್ಲಿ '**Duggapa**') ನಾಯಕನ ಮಗನೆಂಬು ದಾಗಿ ತೋರಿಸಿರುವರು. ಅವರು ಇಂತಹ ನಿರ್ಣಯಕ್ಕೆ ಬರಲು ಕಾರಣವಾದುದು ಗೌಡನಹಳ್ಳಿಯ ಶಾಸನವೇ. 'ದುಗಪನಾಯಕ' ಎಂಬ ವ್ಯಕ್ತಿಯು ಇದ್ದುದು, ಅವನು ದುರ್ಗದ ಕಡೆಯ ಅರಸನ ತಂದೆಯೆನಿಸಿದುದು ಅವರಿಗೆ ಅತ್ಯಂತ ವಾಸ್ತವ ಅಂಶವಾಗಿ ತೋರಿದ್ದಿರಬಹುದು. ಈ ಸಂಬಂಧದಲ್ಲಿ ಸಂಪುಟದ ಪೀಠಿಕೆಯಲ್ಲೂ ಅವರು ಯಾವ ವಿವರಣೆಯನ್ನು ನೀಡಲಾಗಲೀ ಶಂಕೆಯನ್ನು ವ್ಯಕ್ತಪಡಿಸ ಲಾಗಲೀ ಹೋಗಿಲ್ಲ. ಅವರು ರಚಿಸಿಕೊಟ್ಟ ಈ ವಂಶಾನು ಕ್ರಮಣಿಕೆಯನ್ನು ಗಮನಿಸಿ, ಆ ಬಗೆಗೆ ಸಾಕಷ್ಟು ವಿವರ ಗಳುಳ್ಳ ಪ್ರತ್ಯೇಕ ಲೇಖನವೊಂದನ್ನು ಬರೆದು ಪ್ರಕಟಿಸಿ ದವರು ಆರ್. ಎಸ್. ಸಾಲೆತ್ತೊರೆ ಅವರು.

* * *

ಗೌಡನಹಳ್ಳಿಯ ಶಾಸನದಲ್ಲಿಯ ಅಂಶಗಳನ್ನು ಪರಿಶೀಲಿಸುವ ಮುನ್ನ, ಈ ದಿಸೆಯಲ್ಲಿ ಮತ್ತೊಮ್ಮೆ

---

1. *Epigraphia Carnatica*, Vol. XI, Inscriptions in the Chitaldroog District, Bangalore, 1903

ಗಮನ ಹರಿಸಲು ಒದಗಿ ಬಂದ ಸಂದರ್ಭದ ಹಿನ್ನೆಲೆಯನ್ನು ಪ್ರಸ್ತಾಪಿಸುವುದು ಅಗತ್ಯ. ಚಿತ್ರದುರ್ಗದ ಸರ್ಕಾರಿ ಕಲಾ ಕಾಲೇಜಿನ ಇತಿಹಾಸ ಅಧ್ಯಾಪಕ ಶ್ರೀ ಮಹಮ್ಮದ್ ಜಫ್ರುಲ್ಲಾ ಅವರು ಎ. ಕ. ಸಂಪುಟದಲ್ಲಿರುವ ಗೌಡನಹಳ್ಳಿ ಶಾಸನದ ಪಾಠವನ್ನು ಅವಲೋಕಿಸಿ, ಗೌಡನಹಳ್ಳಿಗೆ ಭೇಟಿ ನೀಡಿ ಈ ಶಾಸನವನ್ನು ಸ್ವತಃ ಪರಿಶೀಲಿಸಿದ ತರುವಾಯ, ಲೂಯಿ ರೈಸ್ ಅವರು ಗುರುತಿಸಿದ 'ದುಗಪಣಯಕ' ಎಂಬ ಹೆಸರನ್ನೆ ಸಮರ್ಥಿಸಿ, ಆದರೆ ಯಾವುದೋ ಆಕಸ್ಮಿಕ ಕಾರಣಕ್ಕೆ ಈ ಶಾಸನ ಹೊಸದಾಗಿ ಪತ್ತೆಯಾದಂತೆ ಸೂಚಿಸಿ, 'ಮದಕರಿ ನಾಯಕನ ತಂದೆ ಹೆಸರಿರುವ ಶಾಸನ ಪತ್ತೆ' ಎಂಬ ಶೀರ್ಷಿಕೆಯೊಂದಿಗೆ ಈ ಸಂಬಂಧದ ಸುದ್ದಿಯು ಪತ್ರಿಕೆಯೊಂದರಲ್ಲಿ[2] ಪ್ರಚಾರಗೊಳ್ಳಲು ಕಾರಣರಾದರು. "ಮದಕರಿ ನಾಯಕನ ತಂದೆಯ ಹೆಸರು 'ಜಾನುಕಲ್ಲಿನ ತೊದಲು ಭರಮಪ್ಪ ನಾಯಕ' ಎಂದು ಇತಿಹಾಸಕಾರರ ಅಭಿಪ್ರಾಯ... ಗೌಡನಹಳ್ಳಿಯಲ್ಲಿ ಪತ್ತೆಹಚ್ಚಿರುವ ಶಾಸನದಲ್ಲಿ ಮದಕರಿ ನಾಯಕನ ಮುತ್ತಾತನ ಹೆಸರು ಕಾಮಗೇತಿ ಕಸ್ತೂರಿ ಮದಕರಿ ನಾಯಕ, ತಂದೆಯ ಹೆಸರು ಕಾಮಗೇತಿ ಕಸ್ತೂರಿ ದುಗಣಪಣ ನಾಯಕರೆಂದು ಇದೆ" ಎಂಬುದೇ ಈ ಸುದ್ದಿಯ ಮುಖ್ಯ ಸಾರ.

ಪತ್ರಿಕೆಯಲ್ಲಿ ಪ್ರಕಟವಾದ ಈ ವಿಶೇಷ ವರದಿಗೆ ಪ್ರತಿಕ್ರಿಯೆ ರೂಪದಲ್ಲಿ, ಇದು ಈಗಾಗಲೇ ಪ್ರಕಟಗೊಂಡಿರುವ ಶಾಸನವೆಂದೂ ಶಾಸನದಲ್ಲಿ ಬರುವ 'ದುಗಪಣಯಕ' ಎಂಬ ಹೆಸರು 'ದುಗಣಪಣ ನಾಯಕ' ಎಂದು ವರದಿಯಲ್ಲಿ ಪ್ರಕಟವಾಗಿರುವುದು ಸರಿಯಲ್ಲವೆಂದೂ ಈ 'ದುಗಪಣಯಕ' ('ದುಗ್ಗಪ್ಪ' ಅಥವಾ 'ದುರುಗಪ್ಪ' ಎನ್ನಬಹುದಾದ) ಹೆಸರು ಚಿತ್ರದುರ್ಗ ನಾಯಕರಿಗೆ ಸಂಬಂಧಿಸಿದ ಯಾವ ದಾಖಲೆಗಳಲ್ಲಿಯೂ ಉಲ್ಲೇಖಗೊಂಡಿಲ್ಲವೆಂದೂ ಜಾನಕಲ್ಲು ಗ್ರಾಮದ ತೊದಲು ಭರಮಪ್ಪನಾಯಕನ ಮಗನೇ ಈ ರಾಜಾ ವೀರ ಮದಕರಿನಾಯಕನೆಂಬುದು ಆಧಾರಗಳಿಂದ ಖಚಿತವಾಗಿ ವ್ಯಕ್ತಪಟ್ಟಿರುವ ಅಂಶವೆಂದೂ ಗೌಡನಹಳ್ಳಿ ಶಾಸನದ ಪಾಠದಲ್ಲಿಯ ವ್ಯಕ್ತಿನಾಮಗಳು ದೋಷಪೂರಿತವೆಂದೂ 'ಕಸ್ತರ್ರಿ ದುಗಪಣಯಕ' ಎಂಬುದು 'ಕಸ್ತೂರಿ ರಂಗಪ್ಪ ನಾಯಕ' ಎಂದಿರಬಹುದೆಂದೂ ಈ ಶಾಸನ ಪಾಠದ ಮರು ಪರಿಶೀಲನೆಯ ತರುವಾಯ ರಾಜಾ ಮದಕರಿ ನಾಯಕನ ತಂದೆಯ ವಿಚಾರದಲ್ಲಿ ಸ್ಪಷ್ಟವಾಗಿ ಹೇಳಲು ಸಾಧ್ಯವಾಗಬಹುದೆಂದೂ ಇನ್ನಿತರ ಸಂಗತಿಗಳನ್ನೂ 'ಅವಸರದ ನಿರ್ಣಯ ಸಲ್ಲದು' ಎಂಬ ಹೆಸರಿನಲ್ಲಿ ನಾನು ಬರೆದ ದೀರ್ಘ ಪತ್ರವು ಅದೇ ಪತ್ರಿಕೆಯಲ್ಲಿಯೇ (ದಿನಾಂಕ ೨೪-೮-೮೬) ಪ್ರಕಟಗೊಂಡಿತು.

ಈ ಹಿನ್ನೆಲೆಯಲ್ಲಿ, ದಿನಾಂಕ ೧೩-೧೦-೮೬ ರಂದು ಗೌಡನಹಳ್ಳಿಗೆ ಭೇಟಿಕೊಟ್ಟು ಮೇಲ್ಕಂಡ ವಿಷಯವನ್ನುಳ್ಳ ಶಾಸನವನ್ನು ಸ್ವಯಂ ಪರಿಶೀಲಿಸಿ, ಪ್ರತಿಕ್ರಿಯೆಯಲ್ಲಿ ನಾನು ವ್ಯಕ್ತಪಡಿಸಿದ್ದ ಊಹೆಯು ನೈಜವಾದುದೆಂದೂ ಲೂಯಿ ರೈಸ್ ಅವರು ಪ್ರಕಟಿಸಿದ ಈ ಶಾಸನದ ಪಾಠವನ್ನು ಕೆಲವೆಡೆ ತಿದ್ದುವ ಅಗತ್ಯವಿದೆಯೆಂದೂ ಮನಗಂಡೆ.[3] ಈ ಶಾಸನದ ಪರಿಷ್ಕೃತ ಪಾಠವನ್ನು ಪ್ರಕಟಿಸುವುದರೊಡನೆ ಚಿತ್ರದುರ್ಗ ನಾಯಕರ ಚರಿತ್ರೆಗೆ ಪೂರಕವಾಗಿರುವ ಅದರಲ್ಲಿಯ ಕೆಲವಾರು ಅಂಶಗಳನ್ನು ಚರ್ಚಿಸಲು ಪ್ರಸ್ತುತ ಲೇಖನದಲ್ಲಿ ಪ್ರಯತ್ನಿಸಿರುವೆ.

* * *

ಚಿತ್ರದುರ್ಗ ನಾಯಕರ ಪೂರ್ವೋತ್ತರ, ಆಳಿದ ವರುಷ, ಆಡಳಿತ ವ್ಯವಸ್ಥೆ ಇನ್ನಿತರ ವಿಷಯಗಳನ್ನು

---

2. ಪ್ರಜಾವಾಣಿ (ದೈನಿಕ), ೧೯-೮-೧೯೮೬

3. ಗೌಡನಹಳ್ಳಿಯ ಕ್ಷೇತ್ರಕಾರ್ಯದಲ್ಲಿ ನನ್ನೊಡನಿದ್ದು ನೆರವಾದವರು ಚಿತ್ರದುರ್ಗದ ಲ. ನಾಗರಾಜ ಹೊಯ್ಸಳ ಅವರು. ಗೌಡನಹಳ್ಳಿಯ ಕೆ. ಪಾಂಡುರಂಗ, ಕೆ. ರಾಮಚಂದ್ರ ಹಾಗೂ ಗ್ರಾಮಸ್ಥರು ಈ ಶಾಸನದ ನಕಲು ತೆಗೆಯುವಲ್ಲಿ, ಕೆಲವು ಸಂಗತಿಗಳನ್ನು ಸಂಗ್ರಹಿಸಿಕೊಳ್ಳುವಲ್ಲಿ ಸಹಕರಿಸಿರುತ್ತಾರೆ.

ಇದಕ್ಕೆ ಮುನ್ನ ಈ ಶಾಸನವನ್ನು ಖುದ್ದಾಗಿ ಪರಿಶೀಲಿಸಿ ಬಂದಿದ್ದ ಚಿತ್ರದುರ್ಗದ ಬಿ. ರಾಜಶೇಖರಪ್ಪ ಅವರು ಸಹ (ಕೆಲವು ಅಕ್ಷರಗಳ ವ್ಯತ್ಯಾಸದ ವಿನಾ) ರಂಗಪ್ಪನಾಯಕನ ಹೆಸರನ್ನೆ 'ದುಗಪಣಯಕ' ಎಂದು ಓದಲಾಗಿದೆಯೆಂದು ತಿಳಿಸಿ ನನ್ನ ಊಹೆಯನ್ನು ಸಮರ್ಥಿಸಿದ್ದರು.

ವಿವರಿಸುವ ಲಿಖಿತ ದಾಖಲೆಗಳು (ವಂಶಾವಳಿಗಳು) ಇವೆ. ಈ ವರೆಗೆ ಈ ನಾಯಕರ ಚರಿತ್ರೆಯನ್ನು ಬರೆದವರನೇಕರು ಅವಲಂಬಿಸಿರುವುದು ಇಂತಹ ದಾಖಲೆಗಳನ್ನೆ. ಇವು ದುರ್ಗದ ಅರಸರ ಸಮಕಾಲೀನ ಆಗುಹೋಗುಗಳನ್ನು ಕರಾರುವಾಕ್ಕಾಗಿ ದಾಖಲಿಸಿಕೊಂಡಿರುವ 'ಆರಂಭದ ಚರಿತ್ರಗ್ರಂಥಗಳು.' ಲೂಯಿ ರೈಸ್ ಅವರು ೧೯೦೩ರಲ್ಲಿ 'ಚಿತ್ರದುರ್ಗ ಜಿಲ್ಲೆಯ ಶಾಸನಗಳು' ಸಂಪುಟವನ್ನು ಹೊರತರುವ ಮುನ್ನ ೧೮೯೭ರಲ್ಲಿ ತಾವು ಪ್ರಕಟಿಸಿದ ಮೈಸೂರು ರಾಜ್ಯದ ಕೆಲವು ಜಿಲ್ಲೆಗಳ ಮಾಹಿತಿಯುಳ್ಳ ಗ್ಯಾಸೆಟಿಯರ್‌ನಲ್ಲಿ ಈ ಅರಸರ ಚರಿತ್ರೆಯನ್ನು ಸ್ವಲ್ಪ ಮಟ್ಟಿಗೆ ಕೊಟ್ಟಿದ್ದಾರೆ. 4 ವಂಶಾವಳಿಯಲ್ಲಿ ಸೂಚಿಸಿರುವಂತೆಯೇ ಇವರು ಸಹ (ರಾಜಾ) ಮದಕರಿನಾಯಕನು (ತೊಪಲು) ಬರಮಪ್ಪನಾಯಕನ ಮಗನೆಂಬುದಾಗಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಅವರು ಗೌಡನಹಳ್ಳಿ ಶಾಸನದಲ್ಲಿಯ ಹೆಸರನ್ನು 'ದುಗಪಣಾಯಕ' ಎಂದು ಓದಿ ಅದನ್ನು 'ದುಗ್ಗಪನಾಯಕ' ಎಂದು ಕರೆದು, ಆ ಹೆಸರಿನ ವ್ಯಕ್ತಿಯು ರಾಜಾ ಮದಕರಿನಾಯಕನ ತಂದೆ ಎಂಬುದಾಗಿ ಭಾವಿಸಿದುದು ಕೇವಲ ಆಕಸ್ಮಿಕವೆಂದು ಇದರಿಂದ ವ್ಯಕ್ತಪಡುತ್ತದೆ.

ಶಾಸನ ಸಂಪುಟದಲ್ಲಿ ಲೂಯಿ ರೈಸ್ ಅವರು ತಕ್ಕ ಮಟ್ಟಿಗೆ ರಚಿಸಿಕೊಟ್ಟ ಚಿತ್ರದುರ್ಗ ನಾಯಕರ ವಂಶಾನುಕ್ರಮಣಿಕೆಯನ್ನು ಆಧರಿಸಿ ಆರ್. ಎನ್. ಸಾಲೆತ್ತೊರೆ ಅವರು ದೀರ್ಘವಾದ ಲೇಖನವೊಂದನ್ನು ಬರೆದು ಪ್ರಕಟಿಸಿರುವರು. 5 ಅವರು ಈ ನಾಯಕರ ಚರಿತ್ರೆಯ ಕೆಲವು ಅಂಶಗಳನ್ನು ತಮ್ಮ ಚರ್ಚೆಯ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿರುವರು. ಈ ನಾಯಕರಿಗೆ ಸಂಬಂಧಿಸಿದ ಶಾಸನಗಳನ್ನೂ ಒಂದೆರಡು ಚರಿತ್ರೆಯ ಗ್ರಂಥಗಳನ್ನೂ ತಮ್ಮ ಪ್ರಬಂಧದಲ್ಲಿ ಉಪಯೋಗಿಸಿಕೊಂಡಿರುವರು. ಅವರ ಚರ್ಚೆಯ ಕೆಲವು ವಿಷಯಗಳು ಸ್ವಾರಸ್ಯಕರವಾಗಿವೆ. ಇತರ ಪೂರಕ ಚರ್ಚೆಯೊಡನೆ ಈ ನಾಯಕರ ಪರಿಷ್ಕೃತ ವಂಶಾನುಕ್ರಮಣಿಕೆಯನ್ನು ಪ್ರಕಟಿಸಿರುವುದು ಅವರ ಲೇಖನದ ಮುಖ್ಯ ವೈಶಿಷ್ಟ್ಯ.

ಸಾಲೆತ್ತೊರೆ ಅವರು ಗೌಡನಹಳ್ಳಿಯ ಶಾಸನವನ್ನು ಪ್ರಸ್ತಾಪಿಸಿ ಚಿತ್ರದುರ್ಗದ ಕೊನೆಯ ಅರಸ ರಾಜಾ ಮದಕರಿನಾಯಕನ ವಂಶಸ್ಥರನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ನಾಯಕನು ಬಹುಶಃ ತನ್ನ ಚಿಕ್ಕಪ್ಪ ಇಮ್ಮಡಿ ಕಸ್ತೂರಿ ರಂಗಪ್ಪನಾಯಕನ ತರುವಾಯ ಪಟ್ಟಕ್ಕೆ ಬಂದಿರಬೇಕೆಂದು ಅವರು ಭಾವಿಸಿರುವರು. ಲಿಂಗಣ್ಣ ಕವಿಯು ತನ್ನ 'ಕೆಳದಿನೃಪವಿಜಯಂ' ಕಾವ್ಯದಲ್ಲಿ ನೀಡಿರುವ ದುರ್ಗದ ಅರಸರ ವಂಶಾನುಕ್ರಮಣಿಕೆಯಲ್ಲಿಯ ಒಂದೆರಡು ಹೆಸರುಗಳನ್ನು ಅವರು ಸಾಂದರ್ಭಿಕವಾಗಿ ಉಲ್ಲೇಖಿಸಿರುವರು. ಲಿಂಗಣ್ಣ ಕವಿಯು ದುರ್ಗದ ಅರಸರಲ್ಲದೆ ಕೆಳದಿ ಅರಸರ ಸಮಕಾಲೀನರಾಗಿದ್ದ ಕೆಲವು ಸಂಸ್ಥಾನಿಕರ ವಂಶಗಳನ್ನೂ ಪ್ರಸ್ತಾಪಿಸಿರುವನು. ದುರ್ಗದ ಸಂಸ್ಥಾನವನ್ನು ಕಸ್ತೂರಿ ತಿಮ್ಮಪ್ಪನಾಯಕ, ಸರ್ಜಪ್ಪನಾಯಕ, ಹಿರಿಯ ಚಿಕ್ಕಣ್ಣನಾಯಕ, ಹಿರಿಯ ಮೆದಕೆರೆನಾಯಕ, ಮೆದಕೆರೆನಾಯಕ, ಚಿಕ್ಕಣ್ಣನಾಯಕ, ಮದಕೆರೆನಾಯಕ, ರಂಗಪ್ಪನಾಯಕ, ರಘುವಪ್ಪನಾಯಕ ಮತ್ತು ರಂಗಪ್ಪನಾಯಕರೆಂಬುವರು ಆಳಿದರೆಂತಲೂ ಆ ಬಳಿಕ ಬಿಳಿಜೋಡಿ (ಬಿಳಿಚೋಡು) ಬರಮನಾಯಕನು ದುರ್ಗವನ್ನಾಳುತ್ತಿದ್ದನೆಂತಲೂ ಇದನ್ನು ಕ್ರಮದಿಂದ ಹೇಳಿರುವೆನೆಂತಲೂ ಈತನು ತನ್ನ ಕೃತಿಯಲ್ಲಿ ಪ್ರಸ್ತಾಪಿಸಿರುವನು. 6 ಈ ಬರಮನಾಯಕನ ತರುವಾಯ ಮೆದಕೆರೆನಾಯಕ ಹಾಗೂ ಅವನ ನಂತರ ಅವನ ಮಗ ಕಸ್ತೂರಿ ರಂಗನಾಯಕ

4. *Mysore*, Vol. 2, Westminster, 1897, p. 503
5. *'The Genealogy of the Medakere Nayakas of Citradurga'*, Journal of the University of Bombay, Vol. VIII, Part 4, January 1940, pp. 3-17
6. ಆರ್. ಶಾಮಶಾಸ್ತ್ರಿ (ಸಂ.) : ಲಿಂಗಣ್ಣಕವಿ ವಿರಚಿತ ಕೆಳದಿನೃಪವಿಜಯಂ, ಮೈಸೂರು, ೧೯೭೩, ದಶಮಾಶ್ವಾಸಂ ೨೫, ಪು. ೧೫೭-೫೮

ಇವರುಗಳು ದುರ್ಗವನ್ನು ಆಳುತ್ತಿದ್ದರೆಂಬುದನ್ನೂ ಲಿಂಗಣ್ಣ ಸೂಚಿಸಿದ್ದಾನೆ.[7] ಆದರೆ ಕೊನೆಯ ಅರಸನನ್ನು ಕುರಿತು ಈ ಕವಿಯು ಯಾವ ಸೂಚನೆಯನ್ನೂ ನೀಡಿಲ್ಲವೆನ್ನುವುದು ಮುಖ್ಯವಾದುದು.

ಈ ಸಂಬಂಧದಲ್ಲಿ ಸಾಲೆತ್ತೊರೆ ಅವರು, ಲಿಂಗಣ್ಣ ಕವಿಯು ಉಲ್ಲೇಖಿಸಿರುವುದನ್ನು ಅನುಸರಿಸಿ, ಮುಮ್ಮಡಿ ರಂಗಪ್ಪನೇ ರಘುವಪ್ಪನಾಯಕನಾಗಿರುವಂತೆ ತೋರಿ ಬರುವನೆಂದೂ ಅವನ ನಂತರ ನಾಲ್ಮಡಿ ರಂಗಪ್ಪನಾಯಕನೆಂಬ ಮತ್ತೋರ್ವನು ಬಂದನೆಂದೂ ಈ ನಾಯಕನು ನಾಲ್ಮಡಿ ರಂಗಪ್ಪನಾಯಕನ ತಮ್ಮನಾಗಿರುವ ಸಾಧ್ಯತೆ ಇದೆಯೆಂದೂ ವಿಚಾರ ಮಾಡಿರುವರು. ಆದರೆ ಸದ್ಯಕ್ಕೆ ಈ ನಾಯಕರುಗಳನ್ನು ಕುರಿತು ಶಾಸನಗಳು ದೊರೆಯದಿರುವುದರಿಂದ ಅವರುಗಳ ಬಗೆಗೆ ಏನನ್ನೂ ಹೇಳುವುದು ಕಷ್ಟವೆಂದೂ ಅಭಿಪ್ರಾಯಪಟ್ಟಿರುವರು. ಈ ಹಿನ್ನೆಲೆಯಲ್ಲಿ 'ದುರುಗಪ್ಪನಾಯಕ'ನ ('ದುಗಪಣಯಕ' ಎನ್ನುವುದನ್ನು ಅವರು ಕರೆದಿರುವುದು ಹೀಗೆ) ಪೀಳಿಗೆಯವರ ಬಗೆಗೆ ಖಚಿತವಾಗಿ ಅರಿಯುವುದು ಅಗತ್ಯವೆಂಬುದನ್ನು ಅವರು ಪ್ರತಿಪಾದಿಸಲೆತ್ನಿಸಿದ್ದು, ಈ 'ದುರುಗಪ್ಪನಾಯಕ'ನನ್ನು ಕುರಿತು ಅವರು ವ್ಯಕ್ತಪಡಿಸಿರುವ ಅನೇಕ ಅಭಿಪ್ರಾಯಗಳನ್ನು ಪರಿಶೀಲಿಸಬೇಕಾಗುತ್ತದೆ.

ಕ್ರಿಸ್ತಶಕ ೧೭೫೬ ರ ಗೌಡನಹಳ್ಳಿ ಶಾಸನವು, ಆ ವರುಷದಲ್ಲಿ ಚಿತ್ರದುರ್ಗದಲ್ಲಿ ಅರಸನಾಗಿದ್ದ ರಾಜಾ ಮೆದಕೆರೆನಾಯಕನು ಕಸ್ತೂರಿ ದುರುಗಪ್ಪನ ಮಗ ಹಾಗೂ ಕಾಮಗೇತಿ ಕಸ್ತೂರಿ ಮೆದಕೇರಿನಾಯಕನ ಮೊಮ್ಮಗನೆಂಬುದಾಗಿ ತಿಳಿಸುತ್ತದೆಂದೂ ಅವರಲ್ಲಿ ಒಬ್ಬೊಬ್ಬರಿಗೂ ಸುಮಾರು ೨೫ ವರುಷಗಳ ಅಂದಾಜು ಕಾಲಾವಧಿಯನ್ನು ಗೊತ್ತುಪಡಿಸಿದರೂ ದುರುಗಪ್ಪನಾಯಕನು ಕ್ರಿ.ಶ. ೧೭೩೧ ರಿಂದ ೧೭೫೬ ರ ವರೆಗೆ ಹಾಗೂ ಈತನ ತಂದೆ ಕಸ್ತೂರಿ ಮೆದಕೆರಿನಾಯಕನು ಕ್ರಿ.ಶ. ೧೭೦೬ ರಿಂದ ೧೭೩೧ ರ ವರೆಗೆ ಜೀವಿಸಿದ್ದಿರಬೇಕೆಂದು ಹೇಳಬಹುದೆಂದೂ ಕ್ರಿ.ಶ. ೧೭೨೧ ರಲ್ಲಿ ದುರ್ಗದ ಈರ್ವರು ಅರಸರಲ್ಲಿ ಪ್ರಸಿದ್ಧನಾದ ಒಂದನೆಯ ಭರಮಣ್ಣನಾಯಕ ಮತ್ತು ಅವನ ಮಗ ಕುಮಾರ ಅಥವಾ ಪಟ್ಟದ ಮುಮ್ಮಡಿ ಚಿಕ್ಕಣ್ಣ ಅವರುಗಳು ಇದ್ದರೆಂದೂ ದುರುಗಪ್ಪ(ನಾಯಕ)ನು ಈ ಈರ್ವರಲ್ಲಿ ಯಾರಾದರೊಬ್ಬ ರಾಜಪ್ರಮುಖನ ಮಗನಾಗಿದ್ದಿರಬೇಕೆಂದೂ ಒಂದು ವೇಳೆ ಈ ದುರುಗಪ್ಪನು ಒಂದನೇ ಭರಮಣ್ಣನ ಮಗನಾಗಿದ್ದಿದ್ದರೆ ಹಾಗೆಂದು ಸಹಜವಾಗಿಯೇ ಕರೆದುಕೊಳ್ಳುತ್ತಿದ್ದನೆಂದೂ ಆದರೆ ದುರುಗಪ್ಪನು ಮೆದಕೆರೆನಾಯಕನ ಮಗನೆಂಬುದಾಗಿ ಮಾತ್ರ ಗುರುತಿಸಿಕೊಂಡಿರವುದರಿಂದ, ಈತನು ಬಹುಮಟ್ಟಿಗೆ 'ಮೆದಕೆರೆನಾಯಕ ಕುಮಾರ ಅಥವಾ ಪಟ್ಟದ ಮುಮ್ಮಡಿ ಚಿಕ್ಕಣ್ಣ'ನ ಮಗನಾಗಿದ್ದಿರಬಹುದೆಂದೂ ಸಾಲೆತ್ತೊರೆ ಅವರು ತಮ್ಮ ಲೇಖನದಲ್ಲಿ ಚರ್ಚಿಸಿರುವರು; ರಾಜಾ ಮೆದಕೆರೆನಾಯಕನು ರಘುವಪ್ಪನಾಯಕನಿರಬಹುದೇ ಎಂಬ ಸಂದೇಹವನ್ನು ಸಹ ವ್ಯಕ್ತಪಡಿಸಿರುವರು. ಇಷ್ಟರ ವಿನಾ ಅವರು ಹೆಸರಿಸಿರುವ ಇತರ, ಅಂದರೆ ರಾಜಾ ಮೆದಕೆರೆನಾಯಕನ ಹಿಂದಿನ ಮತ್ತು ಅವನ ನಂತರದ ಅರಸರುಗಳ ಪ್ರಸ್ತಾಪವು ಇಲ್ಲಿ ಅಪ್ರಸ್ತುತ ಎನ್ನಬಹುದು.

ರಾಜಾ ಮದಕರಿಯು ಕ್ರಿ.ಶ. ೧೭೫೭ ರಲ್ಲಿ ನೀಡಿರುವ ತಾಮ್ರಪಟ (ದಾನ) ಶಾಸನವೊಂದನ್ನು ಡಾ॥ ಎಂ. ಶೇಷಾದ್ರಿ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ.[8] ಆ ಪಟದಲ್ಲಿ ಕಂಡರಿಸಲಾಗಿರುವ 'ರಾಜಾ ಮದಕರ್‍ರಿನಾಯಕ' ಎಂಬ ಹೆಸರು 'ಮೆದಕೆರಿನಾಯಕ' ಎಂಬುದರಿಂದ ಭಿನ್ನವಿರಬಹುದೆಂದು ಭಾವಿಸಿ, ಲೂಯಿ ರೈಸ್ ಅವರು ಎ. ಕ. ೧೧ ರಲ್ಲಿ ಪ್ರಕಟಿಸಿರುವ ಹಿರಿಯೂರಿನ ೫೬ನೆಯ (ಗೌಡನಹಳ್ಳಿ) ಶಾಸನವನ್ನು ಪೂರಕವಾಗಿ ಉಲ್ಲೇಖಿಸಿ, 'ಮೆದಕರಿನಾಯಕ'ನು 'ದುಗಪ (Dugapa) ನಾಯಕ'ನ ಮಗನೆಂಬುದಾಗಿ ತಿಳಿದಿರುವುದರಿಂದ ಈ 'ಮದಕರಿನಾಯಕ'ನು ಬೇರೆ

---

7. ಅಲ್ಲೇ, ಏಕದಶಾಶ್ವಾಸಂ ೯, ೧೧, ೨೮, ೨೯ ಮತ್ತು ೩೦, ಪು. ೧೭೩–೭೪, ೧೭೯
8. *The Annual Report of the Mysore Archaeological Department*, 1947–56, Bangalore District, No. 1, pp. 64–66

ಯೆಂಬುದಾಗಿ ತೋರಿಬರುತ್ತದೆಂತಲೂ 'ಮದಕರಿ ನಾಯಕ'ನು ಇಮ್ಮಡಿ ಮೆದಕೆರಿನಾಯಕನ ಸಹೋದರ (ಬಿಚ್ಚುಗತ್ತಿ) ಬರಮಣ್ಣನಾಯಕನ ಸಂತತಿಯವನಾಗಿ ಕಂಡುಬರುವನೆಂತಲೂ ಆದರೆ 'ಮೆದಕರಿನಾಯಕ'ನು ಈ ಇಮ್ಮಡಿ ಮೆದಕೆರಿನಾಯಕನ ಸಂತತಿಯ ನೇರ ವಾರಸುದಾರನಾಗಿರುವನೆಂತಲೂ ಡಾ॥ ಶೇಷಾದ್ರಿ ಅವರು ತಾವು ಸಂಪಾದಿಸಿದ ಶಾಸನ ಪಾಠವನ್ನು ಕುರಿತು ಬರೆದಿರುವ ಟಿಪ್ಪಣಿಯಲ್ಲಿ ವಿಚಾರ ಮಾಡಿರುವರು. ಏನೇ ಇದ್ದರೂ ಲೂಯಿ ರೈಸ್ ಅವರು ಪ್ರಕಟಿಸಿದ ಗೌಡನಹಳ್ಳಿ ಶಾಸನದಲ್ಲಿಯ 'ದುಗಪಣಯಕ' ಎಂಬ ಹೆಸರು ವಿದ್ವಾಂಸರುಗಳನ್ನು ಬೇರೆ ಬೇರೆ ರೀತಿಯಲ್ಲಿ ಆಲೋಚಿಸುವಂತೆ ಮಾಡಿತೆಂಬುದಕ್ಕೆ ಇದು ಇನ್ನೊಂದು ಗಮನಾರ್ಹ ಉದಾಹರಣೆ ಎನ್ನಬಹುದು.

ಮೇಲೆ ಪ್ರಸ್ತಾಪಿಸಿದಂತೆ, ಲೂಯಿ ರೈಸ್, ಸಾಲೆತ್ತೊರೆ ಮತ್ತು ಲಿಂಗಣ್ಣ ಕವಿ ಅವರುಗಳು ಚಿತ್ರದುರ್ಗ ಅರಸರ ವಂಶಾನುಕ್ರಮಣಿಕೆಯ ಬಗೆಗೆ—ಮುಖ್ಯವಾಗಿ, ಕಡೆಯ ರಾಜಾ ಮದಕರಿನಾಯಕ ಹಾಗೂ ಅವನ ತಂದೆಯ ಬಗೆಗೆ ಕೊಟ್ಟಿರುವ ಸೂಚನೆಗಳನ್ನು ಇಲ್ಲಿ ಸ್ಥೂಲವಾಗಿ ಯಾದರೂ ಪರಿಶೀಲಿಸಬೇಕಾಗುತ್ತದೆ. ಲೂಯಿ ರೈಸ್ ಅವರು ಗೌಡನಹಳ್ಳಿ ಶಾಸನದಲ್ಲಿ ರಂಗಪ್ಪನಾಯಕನನ್ನು 'ದುಗಪಣಯಕ'ನೆಂದು ಭಾವಿಸಿ, ಅವನ ಹೆಸರನ್ನು ತಾವು ರಚಿಸಿದ ಈ ನಾಯಕರ ವಂಶಾನುಕ್ರಮಣಿಕೆಯಲ್ಲಿ ಕಡೆಯ ಮದಕರಿನಾಯಕನ ತಂದೆ ಎಂಬಂತೆ ತೋರಿಸಿದುದು, ಸಾಲೆತ್ತೊರೆ ಅವರು ತಮ್ಮ ನಿಶ್ಚಿತವಲ್ಲದ ಹಾಗೂ ಗೊಂದಲಮಯವಾದ ಊಹಾತ್ಮಕ ನಿರ್ಣಯಗಳನ್ನು ಮಂಡಿಸುವ ದಿಸೆಯಲ್ಲಿ ವಿಚಾರ ಮಾಡುವಂತೆ ಪ್ರೇರೇಪಣೆ ನೀಡಿತೆನ್ನಬಹುದು. ಸಾಲೆತ್ತೊರೆ ಅವರು ತಮ್ಮ ಚರ್ಚೆಗೆ ಪೂರಕವಾಗಿ ಬಳಸಿಕೊಂಡಿರುವ ಲಿಂಗಣ್ಣ ಕವಿಯು ಪ್ರಸ್ತಾಪಿಸಿರುವ ಹೆಸರುಗಳು ಸಹ ಪರಿಶೀಲನೆಗೆ ಒಳಪಡುವಂತಹವಾದ್ದರಿಂದ, ಅವರು ರಚಿಸಿಕೊಟ್ಟಿರುವ ಚಿತ್ರದುರ್ಗ ನಾಯಕರ ಪರಿಷ್ಕೃತ ವಂಶಾನುಕ್ರಮಣಿಕೆಯನ್ನು ಪ್ರತ್ಯೇಕವಾಗಿಯೇ ಚರ್ಚಿಸಬೇಕಾಗುತ್ತದೆ. ಇನ್ನು ಡಾ॥ ಶೇಷಾದ್ರಿ ಅವರು ರಾಜಾ ಮದಕರಿಯ ತಂದೆಯ ಬಗೆಗೆ ಆಲೋಚಿಸಿರುವ ರೀತಿಯಾದರೂ ಸಾಲೆತ್ತೊರೆ ಅವರ ನಿರ್ಣಯಗಳ ಜಾಡನ್ನೇ ಅನುಸರಿಸಿದಂತಿದೆ.

ಚಿತ್ರದುರ್ಗ ನಾಯಕರ ವಂಶಾವಳಿಯನ್ನು ರಚಿಸಿದವರು, ದುರ್ಗದ ಸಿಂಹಾಸನವನ್ನು ಏರಿದ ಕಾಮಗೇತಿ ಕುಲದ ನಾಯಕರನ್ನು ಕ್ರಮವಾಗಿ ಮತ್ತಿ ತಿಮ್ಮಣ್ಣ ನಾಯಕ, ದದ್ಯಾನ್ನದ ಓಬಣ್ಣನಾಯಕ (ಗಡ್ಡದ ಮದಕರಿ ನಾಯಕ), (ಒಂದನೆಯ) ಕಸ್ತೂರಿ ರಂಗಪ್ಪನಾಯಕ, ಮದಕರಿನಾಯಕ, ಓಬಣ್ಣನಾಯಕ, ಚಿಕ್ಕಣ್ಣನಾಯಕ, ಮದಕರಿನಾಯಕ, ದೊಣ್ಣೆ ರಂಗಪ್ಪನಾಯಕ, (ಬಿಚ್ಚುಗತ್ತಿ) ಭರಮಣ್ಣನಾಯಕ, ಹಿರಿಯ (ದೊಡ್ಡ) ಮದಕರಿ ನಾಯಕ, (ಎರಡನೆಯ) ಕಸ್ತೂರಿ ರಂಗಪ್ಪನಾಯಕ, (ರಾಜಾ) ಮದಕರಿನಾಯಕ ಎಂದು ಉಲ್ಲೇಖಿಸಿದ್ದಾರೆ.[9] ರಾಜಾ ಮದಕರಿನಾಯಕನ ಆಸ್ಥಾನದಲ್ಲಿದ್ದ ಭೀಮಾಜಿ ಪಂತ್ ಎಂಬ ಮರಾಠಾ ರಾಯಭಾರಿಯು ಪುಣೆಯ ಪೇಶ್ವೆಗೆ ಬರೆದ ತನ್ನ ದೀರ್ಘವಾದ ಪತ್ರದಲ್ಲಿ, ಭರಮಣ್ಣ ನಾಯಕನಿಗಿಂತ ಹಿಂದಿನವರಲ್ಲಿ ಮುಖ್ಯರಲ್ಲದ ಕೆಲವರ ಹೆಸರುಗಳನ್ನು ಮಾತ್ರ ಕೊಟ್ಟಿದ್ದಾನೆ.[10] ಆದರೆ ಲಿಂಗಣ್ಣ ಕವಿಯು ಉಲ್ಲೇಖಿಸಿರುವ ವ್ಯಕ್ತಿಗಳಲ್ಲಿ ಕೆಲವರು ದುರ್ಗದ ಸಿಂಹಾಸನ ಏರಿದವರಲ್ಲ. ಉದಾಹರಣೆಗೆ, ಸರ್ಜಪ್ಪ ನಾಯಕನು (ಒಂದನೆಯ) ಕಸ್ತೂರಿ ರಂಗಪ್ಪನ ಮಗನೆಂಬುದಾಗಿ ವಂಶಾವಳಿಯಲ್ಲಿ ಹೇಳಿದೆ. ಆತನನ್ನು ಸಜ(ಜಿ)ರ್ಾರಾಯನೆಂದೂ ಕರೆದಿದೆ. ಅವನು ಅರಸನಾಗಿರಲಿಲ್ಲ. ಆದರೆ 'ಹಿರೇ ಕೊಮಾರನ ಮಗ ಚಿಕ್ಕಣ್ಣ' ಎಂದು ವಂಶಾವಳಿಯಲ್ಲಿ ಸಂಬೋಧಿಸಲ್ಪಟ್ಟಿರುವ ಚಿಕ್ಕಣ್ಣ ನಾಯಕನು ದುರ್ಗವನ್ನು ಆಳಿದವರಲ್ಲೊಬ್ಬನು. ಅರಸನಲ್ಲದ ರಘುವಪ್ಪನನ್ನು ಭರಮಣ್ಣನ ಮಕ್ಕಳಲ್ಲೊಬ್ಬನಂತೆ ವಂಶಾವಳಿಯಲ್ಲಿ ತೋರಿಸಿದೆ. 'ಚಿತ್ರದುರ್ಗದ ಬಖೈರು' ಈ ಭರಮಣ್ಣನಿಗೆ ಏಳು ಮಂದಿ ಮಕ್ಕಳಿದ್ದರೆಂದು

9. ಉದಾಹರಣೆಗೆ, 'ಶ್ರೀ ಚಿನ್ಮೂಲಾದ್ರಿ ಗಿರಿದುರ್ಗದಲ್ಲಿ ಆಳಿದ ಹಿಂದಿನ ಅರಸರುಗಳು', 'ಚಿನ್ಮೂಲಾದ್ರಿಯ ಪೂರ್ವಾಪರ ವಿಚಾರ ವಿಸ್ತಾರ' ಮೊದಲಾದ ಹಸ್ತಪ್ರತಿಗಳು.

10. ನೋಡಿ : ಹುಲ್ಲೂರು ಶ್ರೀನಿವಾಸ ಜೋಯಿಸ (ಸಂ.) : ಚಿತ್ರದುರ್ಗದ ಬಖೈರು, ಮೈಸೂರು, ೧೯೭೮, ಪು. ೪೯

ಹೇಳುತ್ತದಾದರೂ ಅವರಲ್ಲಿ ಐದು ಮಂದಿಯ ಹೊರತು ಉಳಿದವರ ಹೆಸರುಗಳನ್ನು ತಿಳಿಸುವುದಿಲ್ಲ. ಹೆಸರಿಸಿಲ್ಲದವರಲ್ಲಿ ರಘುವಪ್ಪನೂ ಒಬ್ಬನೆಂದು ಭಾವಿಸಬೇಕಾಗುತ್ತದೆ. ಭರಮಣ್ಣನ ತರುವಾಯ ಅವನ ಮಗ (ಹಿರಿಯ) ಮದಕರಿಯೂ ಅನಂತರ ಅವನ ಮಗ (ಎರಡನೆಯ) ಕಸ್ತೂರಿ ರಂಗಪ್ಪನೂ ಸಿಂಹಾಸನ ಏರಿದರೆಂದು ಲಿಂಗಣ್ಣನು ಸೂಚಿಸಿರುವ ಕ್ರಮ ಸರಿಯಾಗಿದೆ.

ಇಲ್ಲಿ ಪ್ರಸ್ತಾಪಿಸಬೇಕಾದ ಸಂಗತಿಯೆಂದರೆ, ರಾಜಾ ಮದಕರಿನಾಯಕನು ಸಹ (ಬಿಚ್ಚುಗತ್ತಿ) ಭರಮಣ್ಣನಾಯಕನ ಸಂತತಿಗೇ ಸೇರಿದವನು. ಮೇಲೆ ತಿಳಿಸಿದ ಈ ಭರಮಣ್ಣನ ಮಕ್ಕಳಲ್ಲಿ (ಜಾನುಕಲ್ಲು) ತೊದಲು ಭರಮ(ಣ್ಣ)ಪ್ಪನಾಯಕನು ಇನ್ನೋರ್ವನೆಂದೂ ಹಿರಿಯ ಮದಕರಿಯ ತಮ್ಮನೆಂದೂ ವಂಶಾವಳಿಯು ಸೂಚನೆ ನೀಡಿದರೂ ಆತನು ಎಷ್ಟನೆಯ ಮಗನಾಗಿದ್ದವನು, ಇತ್ಯಾದಿ ವಿವರಗಳನ್ನು ಹೇಳುವುದಿಲ್ಲ. ಆದರೆ (ಬಿಚ್ಚುಗತ್ತಿ) ಭರಮಣ್ಣನ ಇಬ್ಬರು ಪಟ್ಟದ ರಾಣಿಯರಲ್ಲಿ ಒಬ್ಬಳಾಗಿದ್ದ (ಎರಡನೆಯ ಹೆಂಡತಿ) ಚಿಕ್ಕಸಿದ್ಧಮ್ಮಾಜಿ ನಾಗತಿಯಲ್ಲಿ ಜನಿಸಿದವರಲ್ಲಿ ಮೂರನೆಯ ಪುತ್ರನೇ ಈ ತೊದಲು ಭರಮಪ್ಪನಾಯಕನೆಂಬ ಸಂಗತಿಯು ತಿಳಿದು ಬರುತ್ತದೆ.11 ಈ ನಾಯಕನಿಗೆ ಜಾನುಕಲ್ಲಿನ ನಾಯಕತನವನ್ನು ವಹಿಸಲಾಗಿದ್ದಿತೆಂದು ದಾಖಲೆಯಲ್ಲಿ ಹೇಳಿದೆ. (ಎರಡನೆಯ) ಕಸ್ತೂರಿ ರಂಗಪ್ಪನು ಕ್ರಿ.ಶ. ೧೭೪೮ ರಿಂದ ೧೭೫೪ರ ವರೆಗಿನ ತನ್ನ ಆರು ವರುಷಗಳ ಆಳ್ವಿಕೆಯ ನಂತರ ಮಕ್ಕಳಿಲ್ಲದೆ ಮೃತನಾಗಲು, ಈ ತೊದಲು ಭರಮಪ್ಪನ ಮಗನನ್ನು ದುರ್ಗದ ಸಿಂಹಾಸನಕ್ಕೆ ಆಯ್ಕೆ ಮಾಡಲಾಯಿತು.

ಕಸ್ತೂರಿ ರಂಗಪ್ಪನಾಯಕನು ಸಂತಾನವಿಲ್ಲದೆ ಕಾಲವಾಗಿ ಹೋದಾಗ, ದುರ್ಗದ ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡವಳು ಆತನ ತಾಯಿ ಓಬಮ್ಮನಾಗತಿ.12 ಸಿಂಹಾಸನಕ್ಕೆ ಸೂಕ್ತ ವಾರಸುದಾರನನ್ನು ಹುಡುಕಲು, ವಂಶಾವಳಿಯ ಪ್ರಕಾರ, ಆಕೆಯ ಸೂಚನೆಯ ಮೇರೆಗೆ, "ಸಕಲ ದಳವಾಯಿಗಳು, ಪ್ರಧಾನರು, ಬಲನಾಯಕರು, ಗುರಿಕಾರರು ಸಹ ಕೂಡಿ ಜಾನಕಲ್ಲೊಳಗೆ ನಾಯಕತನ ಮಾಡಿಕೊಂಡಿದ್ದ ತೊದಲು ಬರಮಣ್ಣನ ಮಗ ಮದಕರಿ ನಾಯಕರನ್ನು ಕರೆಯಿಸಿಕೊಂಡು ಈ ಓಬವ್ವನಾಗತಿಯ ಮಡಿಲೊಳಗೆ ಹಾಕಿದರು." ಈ ಮದಕರಿನಾಯಕನಿಗೆ ಶಕ ೧೬೭೬ ನೆಯ ಭಾವಸಂವತ್ಸರ ಆಶಾಢ ಶು ೧೨ ನೆಯ ದಿನ, ಅಂದರೆ ಕ್ರಿ.ಶ. ೧೭೫೪ ಜುಲೈ ೩೦ ಮಂಗಳವಾರ ದಂದು ದುರ್ಗದ ಬೆಟ್ಟದ ಮೇಲೆ (ಸಂಪಿಗೆ) ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟ ಕಟ್ಟಲಾಯಿತು. ಈ ನಾಗತಿಯು ತಾನು ಸರ್ವಾಧಿಕಾರಿಯಾಗಿ ಮುಂದುವರೆದಳು. ತಾನು ದುರ್ಗದ ಅರಸನಾಗಿ ಪಟ್ಟಾಭಿಷಿಕ್ತನಾದ ಸಂದರ್ಭವನ್ನು, 'ದೊಡ್ಡ ದೊಡ್ಡ ಮನಸುಬೇದಾರರು ಮತ್ತು ಪ್ರಧಾನ್, ದಿವಾನ್, ಭಕ್ಷೀ, ಮುತ್ಸುದ್ದೇರು ಮತ್ತು ಸ್ವಜನರು ವಗೈರೇರು ಬಂಧುಜನ ಸಹಿತ ಕುಳಿತಿರುವಾಗ್ಗೆ' ಅವರೆಲ್ಲರ ಸಮ್ಮುಖದಲ್ಲಿ ಮದಕರಿನಾಯಕನೇ ಸ್ವತಃ ಹೇಳಿಕೊಂಡಂತೆ 'ಚಿತ್ರದುರ್ಗದ ಬಖೈರು'ನಲ್ಲಿ ಪ್ರಸ್ತಾಪಗೊಂಡಿರುವ ಮಾತುಗಳಿವು : "...ಸರ್ವರೂ ತಜವೀಜು ಮಾಡಿ ಆನೆ ಮೇಲೆ ಅಂಬಾರಿ ಹಾಕಿ ದಿವಾನ್ ವಗೈರೆ ಸರ್ವರೂ ಜಾನಕಲ್ಲಿಗೆ ಬಂದು ನಮಗೆ ಪಟ್ಟಾಕಟ್ಟಿ ಕರೆದುಕೊಂಡು ಬಂದರು. ಸಂಗಡಲೇ ಸಿಂಹಾಸನರೂಢರಾದಿವಿ. ಆಗ ಹನ್ನೆರಡು ವರ್ಷದ ವಯಸ್ಸು" (ಪು. ೪೮, ೫೫).

ಚಿತ್ರದುರ್ಗ ಇತಿಹಾಸದಲ್ಲಿ ಈ ಓಬಮ್ಮನಾಗತಿಯ ಸಂದರ್ಭವು ಉಲ್ಲೇಖನೀಯವಾದುದು. ತನ್ನ ಎರಡು ವರುಷಗಳ ಸರ್ವಾಧಿಕಾರತ್ವದಲ್ಲಿ, ದುರ್ಗದ ಆಡಳಿತದ ಮಟ್ಟಿಗೆ, ಈಕೆಯು ಜಾರಿಗೆ ತಂದ 'ಕಟ್ಟಾಜ್ಞೆ'ಗಳ ಬಗೆಗೆ ಪ್ರತ್ಯೇಕವಾಗಿಯೇ ಅಧ್ಯಯನ ಕೈಗೊಳ್ಳಬೇಕಾಗುತ್ತದೆಂದು ಭಾವಿಸಲಾಗುತ್ತದೆ. ವಂಶಾವಳಿ,

---

11. ರಾಜಾ ಬಿಚ್ಚುಕತ್ತಿ ಪರಶುರಾಮಪ್ಪನಾಯಕ : ಚಿತ್ರದುರ್ಗದ ಗಜಕೇಸರಿ, ಒಂದನೆಯ ಭಾಗ, ಚಿತ್ರದುರ್ಗ, ೧೯೬೧, ಪು. ೧೩೯ ; ಹಾಗೂ ಗಮನಿಸಿ : ಬಿ. ಎಸ್. ಶ್ರೀನಿವಾಸನಾಯಕ : ಚಿತ್ರದುರ್ಗದ ಕಾಮಗೇತಿ ಅರಸರು, ತರೀಕೆರೆ (ಚಿಕ್ಕಮಗಳೂರು ಜಿಲ್ಲೆ), ೧೯೮೪, ಪು. ೭-೮

12. ಈ ನಾಗತಿಯನ್ನು ವಂಶಾವಳಿ ಮತ್ತು ಬಖೈರ್‌ನ ಕೆಲವು ಪ್ರತಿಗಳಲ್ಲಿ 'ಓಬವ್ವನಾಗತಿ', 'ಓಬಳವ್ವನಾಗತಿ', 'ಓಬಕ್ಕ ನಾಗತಿ(ನಾಗ್ತಿ)' ಮುಂತಾಗಿ ಸಂಬೋಧಿಸಿದೆ.

ಬಖೈರು ಮತ್ತು ಇತರ ದಾಖಲೆಗಳಲ್ಲಿ ಈಕೆಯನ್ನು ಕುರಿತು ವಿಶೇಷವಾಗಿ ಹೇಳಿಲ್ಲವಾದರೂ ಆಗಿನ್ನೂ ಹುಡುಗನಾಗಿದ್ದ ರಾಜಾ ಮದಕರಿಯು ದುರ್ಗದ ಸಿಂಹಾಸನವನ್ನು ಪರಿಗ್ರಹಿಸಿದ ನಂತರದ ಮೊದಲ ಎರಡು ವರುಷಗಳಲ್ಲಿ ಈಕೆ ಸಂಸ್ಥಾನದ ಅಧಿಕಾರದ ಸರ್ವಸೂತ್ರಗಳನ್ನೂ ತನ್ನ ಮುಷ್ಟಿಯಲ್ಲಿ ಇರಿಸಿಕೊಂಡಿದ್ದಳೆಂಬುದು ವಾಸ್ತವ ಸಂಗತಿ. ಉದಾಹರಣೆಗೆ, "ಈತ [(ಎರಡನೆಯ) ಕಸ್ತೂರಿ ರಂಗಪ್ಪ ನಾಯಕ] ಆದಮೇಲೆ ಓಬವ್ವನಾಗತಿ ಎರಡು ವರ್ಷ ದೊರೆತನ ದರ್ಪ ನೆಡಿಸಿಕೊಂಡು ಪ್ರಧಾನಿಗಳ ಮುಖಾಂತರ ದರ್ಬಾರು ನೆಡಿಸಿಕೊಂಡಿದ್ದಳು" ಎಂಬ ಉಲ್ಲೇಖವು 13 ಇದನ್ನು ಸಮರ್ಥಿಸುತ್ತದೆ.

ಬಹುದು. ಈ ಶಾಸನವು ಎ. ಕ. ೧೧ ರಲ್ಲಿ ಪ್ರಕಟಗೊಂಡಿದ್ದು, ಹೊಳಲ್ಕೆರೆ ತಾಲ್ಲೂಕಿನ ಹೊರಕೆರೆದೇವರಪುರದಲ್ಲಿ ದೊರೆತ ಶಾಸನವೆಂದು (ಸಂಖ್ಯೆ ೫೪) ಗುರುತಿಸಲ್ಪಟ್ಟಿದೆ. ಇದು ದಾನಶಾಸನವಾಗಿದ್ದು, 'ಶಾಲಿವಾಹನ ಶಕ ವರುಷಂಗಳು ೧೬೭೮ನೆಯ ಭಾವಸಂವತ್ಸರದ ಮಾರ್ಗಶಿರ ಬ ೧೩ ಲು' ಈ ದಾನವನ್ನು ನೀಡಲಾಗಿದೆ. (ಇಲ್ಲಿಯ ಕಾಲಮಾನದ ವ್ಯತ್ಯಾಸ ಗಮನಿಸಿ).

ಒಂದೆರಡು ಅಂಶಗಳ ದೃಷ್ಟಿಯಿಂದ ಈ ಹೊರಕೆರೆ ದೇವರಪುರದ ಶಾಸನವು ಅತಿ ಮುಖ್ಯವಾದುದು. ಮೊದಲನೆಯದಾಗಿ, ವಂಶಾವಳಿಕಾರರ ಪ್ರಕಾರ, ಚಿತ್ರದುರ್ಗ ಸಂಸ್ಥಾನವನ್ನು ಪಾಲಿಸಿದ 'ಮತ್ತಿ ಸಂತತಿ'ಯ



ಹೊರಕೆರೆದೇವರಪುರದ ಶಾಸನದಲ್ಲಿ ಓಬಮ್ಮನಾಗತಿಯನ್ನು ನಿರ್ದೇಶಿಸುವ 'ತಾಯಿ' ಎಂಬ ಉಲ್ಲೇಖವಿರುವ ಭಾಗ

ಈ ನಾಗತಿಯನ್ನು ಕುರಿತ ಸೂಚನೆಯು ಶಿಲಾ ಶಾಸನವೊಂದರಲ್ಲಿ ದೊರಕುತ್ತದೆಂಬುದನ್ನು ಈಚೆಗೆ ಶೋಧಿಸಲಾಗಿದ್ದು, ದುರ್ಗದ ಇತಿಹಾಸಕ್ಕೆ ಇದು ಹೊಸ ಅಂಶವೊಂದನ್ನು ಒದಗಿಸಿದೆ ಎಂಬುದನ್ನು ಇಲ್ಲಿ ಪ್ರಸ್ತಾಪಿಸ

ಅರಸರ ತರುವಾಯ (ಮೊದಲನೆಯ ದೊರೆ ಮತ್ತಿ ತಿಮ್ಮಣ್ಣನಾಯಕನಿಂದ ದೊಣ್ಣೆ ರಂಗಪ್ಪನಾಯಕನ ವರೆಗೆ) ಬಿಚ್ಚುಗತ್ತಿ ಭರಮಣ್ಣನಾಯಕನು ಅಧಿಕಾರಕ್ಕೆ ಬರುವುದರೊಂದಿಗೆ 'ಬಿಳಿಚೋಡು ಸಂತತಿ'ಯ ಆಳ್ವಿಕೆಯು

13. 'ಜಾಜೂರು ಕಾಮಸಮುದ್ರ ಸ್ಥಳದ ಶ್ಯಾನುಭೋಗ ತಿಪ್ಪಣನು' ಬರೆದಿರುವ 'ತನ್ನ ಹಿರಿಯರ ಸ್ಥಳಮನೆ ವಿದ್ಯಾಮಾನ ವಂಶ ಪಾರಂಪರೆ'ಯನ್ನು ಹೇಳುವ ಹಸ್ತಪ್ರತಿಯಲ್ಲಿ ಅಡಕವಾಗಿರುವ 'ಮತ್ಸಮುದ್ರಗ್ರಾಮ ಹುಟ್ಟಿದ್ದು' ವೃತ್ತಾಂತದ ಪುಟ ೧೨೦ ರಲ್ಲಿ ಇದು ಉಲ್ಲೇಖಗೊಂಡಿದೆ.

ದುರ್ಗದಲ್ಲಿ ಆರಂಭಗೊಂಡಿತು.[14] ಈ ಭರಮಣ್ಣ ನಾಯಕನಿಂದ ಕಡೆಯ ರಾಜಾ ಮದಕರಿನಾಯಕನ ವರೆಗೆ ದುರ್ಗವನ್ನಾಳಿದ ನಾಲ್ಕು ಮಂದಿ ಅರಸರ ಹೆಸರುಗಳನ್ನು ಕ್ರಮವಾಗಿ ಈ ಶಾಸನದಲ್ಲಿ ಪ್ರಸ್ತಾಪಿಸಲಾಗಿದೆ. ಅವರುಗಳೆಂದರೆ, (ಬಿಚ್ಚುಗತ್ತಿ) ಭರಮಣ್ಣ, (ಹಿರಿಯ) ಮದಕರಿ ನಾಯಕ, (ಎರಡನೆಯ) ಕಸ್ತೂರಿ ರಂಗಪ್ಪನಾಯಕ, ತಾಯಿ (ಓಬವ್ವನಾಗತಿ) ಹಾಗೂ (ರಾಜಾ) ಮದಕರಿ ನಾಯಕ. ಎರಡನೆಯದಾಗಿ, ರಾಜಾ ಮದಕರಿಯ ಪರವಾಗಿ ಸರ್ವಾಧಿಕಾರಿಯಾಗಿದ್ದ ಓಬವ್ವನಾಗತಿ ಯನ್ನು ಇಲ್ಲಿ 'ತಾಯಿ' ಎಂದು ಕಾಣಿಸಿರುವುದು ಗಮನಾರ್ಹವಾದುದು (ಚಿತ್ರ ನೋಡಿ). ಲೂಯಿ ರೈಸ್ ಅವರು ಇದನ್ನು 'ಕಾಯಿ' ಎಂದು ತಪ್ಪಾಗಿ ಓದಿರುವುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು.[15]

ಕ್ರಿಸ್ತಶಕ ೧೭೫೪ ಡಿಸೆಂಬರ್ ೧೨ ರಂದು[16] ಈ ಹೊರಕೆರೆದೇವರಪುರದ ದಾನಶಾಸನವನ್ನು ಸಂಬಂಧಿಸಿದವರಿಗೆ ನೀಡುವ ಸಂದರ್ಭದಲ್ಲಿ ಓಬವ್ವನಾಗತಿಯು ಉಪಸ್ಥಿತಳಿದ್ದು, ಆಕೆಯ ನಿರ್ದೇಶನದ ಮೇರೆಗೆ ರಾಜಾ ಮದಕರಿಯ ಸಮ್ಮುಖದಲ್ಲಿ ಈ ಕಾರ್ಯ ನಡೆದಿರುವಂತೆ ತೋರುತ್ತದೆ. ಅದಕ್ಕಾಗಿಯೇ ಆಕೆಯ ಪ್ರಸ್ತಾಪ ಸೂಚ್ಯ

---

14. ದುರ್ಗದ ಸಂಸ್ಥಾನವನ್ನು ಈ ಎರಡು ಸಂತತಿಗಳ ಅರಸರು ಪಾಲಿಸಿದರೆಂಬ ಬಗೆಗೆ ಭಿನ್ನಾಭಿಪ್ರಾಯಗಳಿವೆ.

15. ಲೂಯಿ ರೈಸ್ ಅವರು 'ಕಾಯಿ' ಎಂಬ ಪದವನ್ನು ಇಂಗ್ಲಿಷ್‌ಗೆ ಲಿಪ್ಯಂತರಗೊಳಿಸುವಲ್ಲಿ **'ka...'** ಎಂದಷ್ಟೆ ಉಲ್ಲೇಖಿಸಿ (ಪು. ೨೦೧) ತಮ್ಮ ಓದಿಕೆ ಬಗೆಗೆ ತಾವೇ ಅನುಮಾನ ವ್ಯಕ್ತಪಡಿಸಿರುವುದು ಸ್ವಾರಸ್ಯಕರವಾದುದು. ಆದರೆ ಇಂಗ್ಲಿಷ್ ಅನುವಾದದಲ್ಲಿ 'ಕಾಯಿ' ಎಂಬುದಕ್ಕೆ **'guard'** (*'Kasturi-Rangappa-Nayaka's guard Medikere-Nayaka...'*) ಎಂಬಂತೆ ಅರ್ಥೈಸಿರುವರು (ಪು. ೧೨೧).

ಹೊರಕೆರೆದೇವರಪುರದ ಈ ದಾನಶಾಸನದ ಪ್ರಕಟಿತ ಪಾಠದ ಓದಿಕೆಯು ಹಲವಾರು ದೋಷಗಳಿಂದ ಕೂಡಿದ್ದು, ಸ್ವಯಂ ಪರಿಶೀಲನೆಯಿಂದ ಕಂಡುಕೊಂಡ ಅಂತಹವುಗಳನ್ನು ಶಾಸನ ಪಾಠದ ಮೊದಲ ಹತ್ತು ಸಾಲುಗಳಿಗೆ ಮಾತ್ರ ಸಂಬಂಧಿಸಿದಂತೆ ಪರಿಷ್ಕರಿಸಿ ಇಲ್ಲಿ ಕೊಟ್ಟಿದೆ :

೧. ಸ್ವಸ್ತಿಶ್ರೀ ವಿಜೆಯಾಬ್ಯುದಯ
೨. ಶಾಲಿವಾಹನ ಶಕ ವರುಷಂಗಳು
೩. ೧೬೭೭ನೆಯ ಭಾವ ಸಂವಾತ್ಸರ
೪. ಧ। ಮಾರ್ಗಶಿರ ಬ ೧೩ಲು ಶ್ರೀಮಂನ್ಮ
೫. ಹಾ ನಾಯಕಚಾರ್ಯ ಕಮಗೆತಿ ಕಸ್ತೂ
೬. ರ್‍ರಿ ಬರಮಂಣನಾಯಕರ ಮೆದಕೆ
೭. ರ್‍ರಿ ನಾಯಕರ ಕೊಮರ ಕಸ್ತೂರ್‍ರಿ ರಂ
೮. ಗಪನಾಯಕರ । ತಾಯಿ ಮೆದಕೆರ್‍ರಿ
೯. ನಾಯಕರು ಹೊರ್‍ರಕೆರ್‍ರಿ ರಂಗಧಮ
೧೦. ನ ದಡಿಗೆ ಧಸರು । ಕಂಗಳ ರಂಗದ

...............

ದಿನಾಂಕ ೨೫-೧೨-೮೬ ರಂದು ನಾನು ಕೈಗೊಂಡ ಹೊರಕೆರೆದೇವರಪುರದ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದವರು ಅಲ್ಲಿಯ ಶ್ರೀ ಲಕ್ಷ್ಮೀನರಸಿಂಹ ದೇವಸ್ಥಾನದ ಅರ್ಚಕರಾದ ಗೋಪಾಲಭಟ್ ಹಾಗೂ ಎಸ್. ಸಿದ್ಧೇಶ್ವರ, ಟಿ. ಎಚ್. ಶಿವಣ್ಣ, ಆರ್. ಮಂಜಪ್ಪ, ಎಚ್. ಆರ್. ವಿಜಯ್ ಮತ್ತು ಗ್ರಾಮಸ್ಥರು. ಜತೆಗಿದ್ದು ನೆರವಾದವರು ಲ. ನಾಗರಾಜ ಹೊಯ್ಸಳ ಅವರು.

16. ಈ ಶಾಸನದಲ್ಲಿ ಶಕವರುಷ ೧೬೭೭ನೆಯ ಭಾವ ಸಂವತ್ಸರ ಎಂದಿದೆ. ಇಲ್ಲಿಯ ಕಾಲಮಾನವು ಕ್ರಿಸ್ತಶಕಕ್ಕೆ ಹೊಂದಾಣಿಕೆಯಾಗುವುದಿಲ್ಲ. ಈ ಸಂವತ್ಸರವು ಶಕ ೧೬೭೬ ರಲ್ಲಿ ಬಂದಿರುವುದರಿಂದಲೂ ಅದು ಓಬವ್ವನಾಗತಿಯ ಜೀವಿತಕಾಲಕ್ಕೆ ಹೊಂದುವುದರಿಂದಲೂ ಅದನ್ನು ಅಂತೆಯೇ ಒಪ್ಪಬೇಕಾಗುತ್ತದೆ. ಈ ಶಾಸನದಲ್ಲಿ ಶಕ ೧೬೭೮ ಎಂದು ತಪ್ಪಾಗಿ ಕಂಡರಿಸಿದುದರ ಉದ್ದೇಶವನ್ನು ಊಹಿಸಲಾಗುವುದಿಲ್ಲ.

ವಾಗಿಯಾದರೂ ಇಲ್ಲಿ ಬಂದಿದೆ. ಹಿರಿಯ ಮದಕರಿಯ ಪಟ್ಟದ ನಾಗತಿಯಾಗಿದ್ದ ಈಕೆಯು ಈ ಶಾಸನದಲ್ಲಿ ತನ್ನನ್ನು ಕಸ್ತೂರಿ ರಂಗಪ್ಪನ ತಾಯಿ ಎಂಬುದಾಗಿ ಗುರುತಿಸಿಕೊಂಡಿದ್ದಾಳೆ. ದುರ್ಗದ ಚರಿತ್ರೆಯ ಮಟ್ಟಿಗೆ ಇದೊಂದು ಅಪರೂಪದ ಶಾಸನ ಎನ್ನಬಹುದು.

ವಂಶಾವಳಿಗಳು ತಿಳಿಸುವಂತೆ, ಸರ್ವಾಧಿಕಾರಿಯಾಗಿದ್ದ ಓಬಮ್ಮನಾಗತಿಯು '(ಶಕ ೧೬೭೮ನೆಯ) ಧಾತು (ಧಾತ್ರಿ) ಸಂವತ್ಸರದ ಜೇಷ್ಟ ಬಹುಳ ೩ ರಲ್ಲು ಸ್ವರ್ಗಸ್ಥಳಾದಳು.' ಇದು ಕ್ರಿ. ಶ. ೧೭೫೬ ಜೂನ್ ೧೫ನೆಯ ಮಂಗಳವಾರಕ್ಕೆ ಹೊಂದುತ್ತದೆ.[17] ಈ ಹಿನ್ನೆಲೆಯಲ್ಲಿ, ಗೌಡನಹಳ್ಳಿ ಶಾಸನದ ತೇದಿಯನ್ನು ಗಮನಿಸಿದರೆ, ಲೂಯಿ ರೈಸ್ ಅವರ ಓದಿಕೆಯ ಪ್ರಕಾರ, ಇದನ್ನು 'ಶಕ ವರುಷ ೧೬೭೯ನೆಯ ಧಾತುನಾಮ ಸಂವತ್ಸರ ವಯಿಶಾಕ ಶು [18] ೧ ಸ್ಥಿರವಾರದಲ್ಲು' ಕೊಟ್ಟಿದೆ. ಇಂಗ್ಲಿಷ್ ತೇದಿಯ ಪ್ರಕಾರ, ಇದು ಕ್ರಿ.ಶ. ೧೭೫೬ ಏಪ್ರಿಲ್ ೩೦ ಶುಕ್ರವಾರಕ್ಕೆ ಹೊಂದುತ್ತದೆ. ಇಲ್ಲಿಯ 'ಶುಕ್ಲ ೧ ಸ್ಥಿರವಾರ'ವು ಲೂಯಿ ರೈಸ್ ಅವರ ಓದಿಕೆಯ ಮಟ್ಟಿಗೆ ಶುಕ್ರವಾರದಂದು ಆರಂಭಗೊಳ್ಳುತ್ತದೆ. ಆದರೆ 'ಬಹುಳ ೧ ಸ್ಥಿರವಾರ'ವು ಶನಿವಾರಕ್ಕೆ ಅನ್ವಯಿಸುತ್ತದಾದ್ದರಿಂದ ಇಲ್ಲಿ 'ಬಹುಳ' ಎಂಬುದೇ ಸರಿ. ಶಾಸನದಲ್ಲಿಯೂ ಹಾಗೆಯೇ ಹೇಳಿದೆ. ಆಗ ಈ ತೇದಿಯು ಕ್ರಿ.ಶ. ೧೭೫೬ ಮೇ ೧೫ ಶನಿವಾರಕ್ಕೆ ಹೊಂದುತ್ತದೆ. ಈ ದೃಷ್ಟಿಯಿಂದ ಓಬಮ್ಮನಾಗತಿಯು ಕಾಲವಾದುದಕ್ಕೂ ಈ ದಾನಶಾಸನ ಹಾಕಿಸಿದುದಕ್ಕೂ ಸಂಬಂಧ ಇದ್ದಿರಬೇಕೆಂಬ ಸಂಶಯವು ಮೇಲ್ನೋಟಕ್ಕೇ ಮೂಡದಿರಲಾರದು (ಶಾಸನ ಪಾಠ ನೋಡಿ).

ಆದರೆ ವಂಶಾವಳಿಯಲ್ಲಿ ಉಲ್ಲೇಖಗೊಂಡಿರುವ ಓಬಮ್ಮನಾಗತಿಯು ಕಾಲವಾದ ಸೂಚನೆಯುಳ್ಳ ತೇದಿಯು ಗೌಡನಹಳ್ಳಿ ಶಾಸನದಲ್ಲಿಯ ತೇದಿಗೆ ಹೊಂದಿಕೆಯಾಗುವುದಿಲ್ಲವೆಂಬುದು ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಾಗುತ್ತದೆ. ಈ ನಾಗತಿಯು ಮೃತಳಾಗುವ ಸುಮಾರು ಒಂದು ತಿಂಗಳು ಮೊದಲೇ ಗೌಡನಹಳ್ಳಿ ಶಾಸನವನ್ನು ಹಾಕಿಸಿರುವಂತೆ ಇಲ್ಲಿ ಕಂಡುಬಂದರೂ ವಾಸ್ತವವಾಗಿ ಆಕೆಯು ಮೃತಳಾದ ನಂತರವೇ ರಾಜಾ ಮದಕರಿನಾಯಕನು ಆಕೆಗೆ ಸದ್ಗತಿ ದೊರಕಲೆಂಬ ಉದ್ದೇಶದಿಂದ ಈ ದಾನಶಾಸನ ಹಾಕಿಸಿರುವನೆಂದು ಖಚಿತವಾಗಿ ಹೇಳಬಹುದು. ಈ ಶಾಸನವು ಈ ನಾಗತಿಯ ಹೆಸರಿನಲ್ಲೆ (ಆಕೆಯ ನೆನಪಿಗಾಗಿ) ಇದೆಯೆಂಬುದು ಸುಸ್ಪಷ್ಟ. ಆಕೆಯು ಕಾಲವಾದ ತೇದಿಯನ್ನು ಉಲ್ಲೇಖಿಸುವಲ್ಲಿ ವಂಶಾವಳಿಕಾರರು ವ್ಯತ್ಯಾಸ ಮಾಡಿರುವುದನ್ನು ಈ ಸಂಬಂಧದಲ್ಲಿ ಪರಿಶೀಲಿಸಬೇಕಾಗುತ್ತದೆ. ಇದು ಸಹ ಆಕೆಯ ಮರಣಾನಂತರವೇ ಈ ಶಾಸನವನ್ನು ಹಾಕಿಸಿರುವ ಸಾಧ್ಯತೆ ಕುರಿತು ಪರೋಕ್ಷ ಸೂಚನೆ ನೀಡುತ್ತದೆ.

ಈ ಬಗೆಗೆ ಇಲ್ಲಿ ಪ್ರಸ್ತಾಪಿಸಬೇಕಾದ ಮತ್ತೊಂದು ಮುಖ್ಯಾಂಶವೆಂದರೆ, 'ಚಿತ್ರದುರ್ಗದ ಬಖೈರು'ನಲ್ಲಿ ರಾಜಾ ಮದಕರಿಯು ಈ ನಾಗತಿಯನ್ನು 'ನಮ್ಮ ಮಾತೋಶ್ರೀ ಓಬಮ್ಮನಾಗತಿಯವರು' ಎಂದು ಸಂಬೋಧಿಸಿರುವನು (ಪು. ೫೪). 'ಬಖೈರ್'ನ ಕೆಲವು ಪ್ರತಿಗಳಲ್ಲಿ ಈಕೆಯನ್ನು 'ಮಹಾ ಮಾತೋಶ್ರೀ ಓಬಕ್ಕ ನಾಗತಿಯವರು' ಎಂತಲೂ ಹೇಳಿದೆ. ಒಟ್ಟಿನಲ್ಲಿ, ರಾಜಾ ಮದಕರಿಯು, ತನ್ನನ್ನು ದುರ್ಗದ ಸಿಂಹಾಸನದ ಮೇಲೆ ಕೂರಿಸಲು ಕಾರಣಳಾದ ಹಾಗೂ ತನ್ನನ್ನು ಪೋಷಿಸಿ, ತನ್ನ ಪರವಾಗಿ ರಾಜ್ಯದ ಸೂತ್ರವನ್ನು ಹಿಡಿದು ಎರಡು

17. ಎಂ. ಎಸ್. ಪುಟ್ಟಣ್ಣ ಅವರು 'ಚಿತ್ರದುರ್ಗದ ಪಾಳಯಗಾರರು' ಗ್ರಂಥದಲ್ಲಿ (ಬೆಂಗಳೂರು, ೧೯೨೪), ಈ ನಾಗತಿಯು 'ಧಾತು ಸಂ|| ಜ್ಯೇಷ್ಠ ಶು|| ೩ಯಲ್ಲು' ತೀರಿಹೋದಳೆಂದು ಉಲ್ಲೇಖಿಸಿದ್ದಾರೆ (ಪು. ೬೨). ಇದನ್ನು 'ಕ್ರಿ|| ೧೭೫೫' ಎಂದು ಗ್ರಂಥದ ಕಡೆಯಲ್ಲಿರುವ 'ಕಾಲಾನುಸರಣಿಕೆ' ವಿಭಾಗದಲ್ಲಿ (ಪು. ೬) ಸೂಚಿಸಿದ್ದಾರೆ. ಆದರೆ ಇದು ಕ್ರಿ.ಶ. ೧೭೫೬ ಜೂನ್ ೧ ನೆಯ ಮಂಗಳವಾರಕ್ಕೆ ಹೊಂದುತ್ತದೆ. ಬಹುಶಃ ಇವರಿಗೆ ದೊರೆತ ವಂಶಾವಳಿ ಪ್ರತಿಯಲ್ಲಿ ಹೀಗಿರಬಹುದು. ಆದರೆ ಈ ಎರಡು ತೇದಿಗಳೂ ಅನುಮಾನಾಸ್ಪದವಾದುವು.

18. ಇದನ್ನು 'ಬ' (ಬಹುಳ) ಎಂಬುದಕ್ಕೆ 'ಶು' (ಶುಕ್ಲ) ಎಂದು ತಪ್ಪಾಗಿ ಓದಲಾಗಿದೆ. ಈ ಲೇಖನದ ಕೊನೆಯಲ್ಲಿ ಕೊಟ್ಟಿರುವ ಈ ಶಾಸನದ ಪರಿಷ್ಕೃತ ಪಾಠವನ್ನು ಗಮನಿಸಿ.

ವರುಷಗಳ ಕಾಲ ಸುಸೂತ್ರವಾಗಿ ಆಳ್ವಿಕೆ ನಡೆಸಿ ಮೃತಳಾದ 'ಮಾತೋಶ್ರೀ ಓಬಮ್ಮನಾಗತಿಯುವರ' ಹೆಸರಿನಲ್ಲಿ ತನ್ನ ಹಿರಿಯರಿಗೆ ಪುಣ್ಯವಾಗಬೇಕೆಂದು ಹಿರಿಯೂರಿನಲ್ಲಿ ಮಠವೊಂದನ್ನು ಮಾಡಿಸಿ ಅದಕ್ಕೆ ಅದೇ ಸೀಮೆಯೊಳಗಿನ ಗೌಡನಹಳ್ಳಿಯನ್ನು ದಾನಪೂರ್ವಕವಾಗಿ ಬಿಟ್ಟುಕೊಟ್ಟನೆಂಬುದು ಇದರಿಂದ ಮತ್ತಷ್ಟು ದೃಢಪಡುತ್ತದೆ. ತಮ್ಮ ತಂದೆ-ತಾಯಿಯವರಿಗೆ ಅಥವಾ ಹಿರಿಯರಿಗೆ ಪುಣ್ಯವಾಗಲೆಂದು ಈ ರೀತಿಯಲ್ಲಿ ದಾನ ನೀಡಿ ಆ ಪ್ರಯುಕ್ತ ಶಾಸನಗಳನ್ನು ಹಾಕಿಸುತ್ತಿದ್ದುದು ಈ ನಾಯಕರು ಸಹ ಅನುಸರಿಸಿಕೊಂಡು ಬಂದಿದ್ದ ಪದ್ಧತಿಯಾಗಿದ್ದಿತು. ಬಿಚ್ಚುಗತ್ತಿ ಭರಮಣ್ಣನಾಯಕನು ಸಹ ತನ್ನ ಮಾತಾ-ಪಿತೃಗಳಿಗೆ ಪುಣ್ಯವಾಗಬೇಕೆಂದು ದಾನ ಮಾಡಿದುದನ್ನು ಪ್ರಸ್ತುತ ಸಂದರ್ಭಕ್ಕೆ ಒಂದು ಸಾಮಾನ್ಯ ಉದಾಹರಣೆಯಾಗಿ ತೋರಿಸಬಹುದು.[19]

ಈ ಮೇಲಿನ ಚರ್ಚೆ ಹಾಗೂ ಪ್ರಸ್ತಾಪಿಸಲಾಗಿರುವ ಪೂರಕ ಮಾಹಿತಿಯನ್ನನುಸರಿಸಿ ಗೌಡನಹಳ್ಳಿ ಶಾಸನದ ಮರು ಪರಿಶೀಲನೆಯ ಹಿನ್ನೆಲೆಯಲ್ಲಿ ಈ ಮುಂದಿನಂತೆ ನಿರ್ಣಯಗಳನ್ನು ಮಂಡಿಸಬಹುದು : ೧. ಈ ದಾನ ಶಾಸನದ ತೇದಿಯು ಶಕವರುಷ ೧೬೭೭ನೆಯ ಧಾತ್ರಿನಾಮ ಸಂವತ್ಸರ ವೈಶಾಖ ಬಹುಳ ೧ ಸ್ಥಿರವಾರ, ಅಂದರೆ ಕ್ರಿ. ಶ. ೧೭೫೬ ಮೇ ೧೫ ಶನಿವಾರ ; ೨. ಇದನ್ನು ಹಾಕಿಸಿದ ರಾಜಾ ಮದಕರಿನಾಯಕನ 'ತಂದೆ'ಯು 'ದುಗಪಣಯಕ', 'ದುಗಣಪಣಯಕ' ಅಥವಾ 'ದುರುಗಪ್ಪನಾಯಕ' ಅಲ್ಲ, '(ಕಸ್ತೂರಿ) ರಂಗಪ(್ಪ)ನಾಯಕ' ; ೩. ನಾಯಕನು ಇದನ್ನು ತನ್ನ 'ಮಾತೋಶ್ರೀ ಓಬಮ್ಮನಾಗತಿಯುವರ' ಹೆಸರಿನಲ್ಲಿ ಸ್ಥಾಪಿಸಿದ್ದಾನೆ, ಹಾಗೂ ಈ ಶಾಸನಕ್ಕೆ ಹೊರಕೆರೆದೇವರಪುರದ ಶಾಸನವು ಪೂರಕವಾಗಿದೆ.

* * *

ಗೌಡನಹಳ್ಳಿಯ 'ಊರುಬಾಗಿಲು' ಮುಂಭಾಗದಲ್ಲಿ ಅದಕ್ಕೆ ಒರಗಿಸಿರುವಂತೆಯೇ ಈಗ ಈ ಶಾಸನ ಕಂಡುಬರುತ್ತದೆ. ಸ್ಥಳೀಯವಾಗಿ ದೊರಕುವ ಚಪ್ಪಡಿ ಕಲ್ಲನ್ನು ಬಳಸಿ ಅದರ ಮೇಲೆ ಶಾಸನದ ಪಾಠವನ್ನು ಕಂಡರಿಸಲಾಗಿದೆ. ಲೂಯಿ ರೈಸ್ ಅವರು ಪ್ರಕಟಿಸಿರುವ ಈ ಶಾಸನದ ಪಾಠದಲ್ಲಿ ಒಟ್ಟು ೨೧ ಸಾಲುಗಳಿದ್ದುವೆಂದು ತಿಳಿದರೂ ಈಗ ಆರಂಭದ ೧೦ ಸಾಲುಗಳ ವಿನಾ ಉಳಿದ ಎಲ್ಲ ಸಾಲುಗಳು ಆ ಭಾಗದ ಕಲ್ಲಿನ ಚಕ್ಕಳ ಎದ್ದು ಹೋಗಿರುವುದರಿಂದ ಕಾಣೆಯಾಗಿವೆ. ೧೧ನೆಯ ಸಾಲಿನಲ್ಲಿ





ಗೌಡನಹಳ್ಳಿ ಶಾಸನದ ಪಾಠ : ಮೂಲ (ಮೇಲೆ), ಅದರ ಪ್ರತಿ (ಕೆಳಗೆ)

---

19. *E. C.*, Vol. XI, Hl. 105 (1702 A.D.) : ಈ ಶಾಸನದ ಪಾಠವು ತ್ರುಟಿತವಾಗಿರುವುದೆಂದು ತೋರಿಸಲಾಗಿರುವುದರಿಂದ ಈ ನಾಯಕನು ಏನನ್ನು ದಾನ ಮಾಡಿರುವನೆಂಬುದು ಸ್ಪಷ್ಟಪಡುವುದಿಲ್ಲ.

ಸಹ ಕೆಲವು ಅಕ್ಷರಗಳ ಹೊರತು ಇತರ ಅಕ್ಷರಗಳು ಮಾಯವಾಗಿವೆ. ಅಲ್ಲದೆ, ಈ ಶಾಸನದ ಕಲ್ಲು ಓರೆಯಾಗಿ ಸೀಳಿ ಎರಡು ಭಾಗವಾಗಿರುವುದರಿಂದ ಸೀಳಿನ ಅಕ್ಕಪಕ್ಕದ ಸಾಲುಗಳಲ್ಲಿಯ ಕೆಲವು ಅಕ್ಷರಗಳು ಮುಕ್ಕಾಗಿವೆ. ಇದೇ ಸ್ಥಿತಿಯು ೭ ರಿಂದ ೧೦ ರ ವರೆಗಿನ ಸಾಲುಗಳಿಗೂ ಉಂಟಾಗಿದೆ. ಆದರೆ ಶಾಸನ ಪಾಠದ ಮುಖ್ಯಭಾಗವು ಸ್ಪಷ್ಟವಾಗಿದ್ದು ಪ್ರಸ್ತುತ ಅಧ್ಯಯನಕ್ಕೆ ಅನುಕೂಲಕರ ವಾಗಿದೆ.[20]

ಶಾಸನದ ಪಾಠದಲ್ಲಿ ಬರುವ ಕೆಲವು ಸಂಗತಿಗಳನ್ನು ಇಲ್ಲಿ ಪರಿಶೀಲಿಸುವುದಾದರೆ, ರಾಜಾ ಮದಕರಿನಾಯಕನು ತನ್ನ ಅವಧಿಯ ಇತರ ಶಾಸನಗಳಲ್ಲಿರುವಂತೆಯೇ ಕಸ್ತೂರಿ ರಂಗಪ್ಪನಾಯಕನನ್ನೇ ತನ್ನ ತಂದೆ ಎಂಬುದಾಗಿ ಕರೆದು ಕೊಂಡಿದ್ದಾನೆ; ಜತೆಗೆ (ಹಿರಿಯ) ಮದಕರಿನಾಯಕನನ್ನು (ರಂಗಪ್ಪನ ತಂದೆ) ತನ್ನ ಅಜ್ಜನೆಂಬುದಾಗಿ ಉಲ್ಲೇಖಿ ಸಿರುವುದು ವಿಶೇಷವಾಗಿದೆ. ಅರಸುತನದ ರೀತಿ-ರಿವಾ ಜನ್ನು ಇಲ್ಲಿ ಕ್ರಮವರಿತು ಬಳಸಲಾಗಿದೆ. ಮೇಲೆ ತಿಳಿಸಿದ, ಕ್ರಿ.ಶ. ೧೭೫೭ ಮೇ ೨೮ ಶನಿವಾರದಂದು ಈ ನಾಯಕನು ನೀಡಿದ ದಾನಶಾಸನ(ತಾಮ್ರಪಟ)ದಲ್ಲಿಯೂ ಹೀಗೆಯೇ ಬರೆಯಿಸಲಾಗಿದೆ.[21] ಇತರ ಶಾಸನಗಳಲ್ಲಿಯೂ ಈ ನಾಯಕನು 'ಕಸ್ತೂರಿ ರಂಗಪ್ಪನಾಯಕರ ರಾಜಾ ಮದಕರಿ ನಾಯಕರು' ಎಂತಲೇ ಹೇಳಿಕೊಂಡಿರುವನು.[22] ಇಂತಹ ಅನೇಕ ಉದಾಹರಣೆಗಳಿವೆ. ಇಲ್ಲಿ ಉಲ್ಲೇಖಾರ್ಹವಾದ ಅಂಶವೆಂದರೆ, ವಂಶಾವಳಿಕಾರರ ಪ್ರಕಾರ, ದುರ್ಗದ ಇತಿಹಾಸದಲ್ಲಿ ಎರಡನೆಯ ಸಂತತಿಯ ಆಳ್ವಿಕೆಯೆಂದು ಹೇಳಲಾಗುವ ಹಾಗೂ ಮೇಲೆಯೇ ಪ್ರಸ್ತಾಪಿಸಲಾಗಿರುವ 'ಬಿಳಿಚೋಡು ಸಂತತಿ' (ಅಥವಾ 'ಆದಿಬುಳ್ಳನ ಸಂತತಿ')ಗೆ ಸೇರಿದವನೆನಿಸಿದ ಬಿಚ್ಚುಗತ್ತಿ ಭರಮಣ್ಣ ನಾಯಕನು ಸಹ ತಾನು ಹಾಕಿಸಿದ ಶಾಸನಗಳಲ್ಲಿ, ದುರ್ಗದ ಸಿಂಹಾಸನವನ್ನೇರಿದ ತನಗಿಂತ ಹಿಂದಿನ ಅರಸರನ್ನು ಹೆಸರಿಸಿರುವನು. 'ಕಾಮಗೆತ್ತಿ ಕಸ್ತೂರಿ ರಂಗಪ್ಪ ನಾಯಕರ ಪೌತ್ರರಾದ ಮೆದಕೆರಿನಾಯಕರ ಪುತ್ರರಾದ ಬರಮಂಣನಾಯಕರು' ಎಂದು ತನ್ನನ್ನು ಕರೆದುಕೊಂಡು ಅರಸು ಮನೆತನದ ಪರಂಪರೆಯನ್ನು ಉಳಿಸಿಕೊಂಡಿರು ವನು.[23] ಈಗನ ಮಗ ಹಿರಿಯ ಮದಕರಿಯು ಸಹ ತಾನು ಕಸ್ತೂರಿ ಮದಕರಿನಾಯಕನ ಪೌತ್ರನೆಂದೂ ಭರಮಣ್ಣನಾಯಕನ ಪುತ್ರನೆಂದೂ ಹೇಳಿಕೊಂಡು ಇದೇ ಕ್ರಮವನ್ನು ಮುಂದುವರೆಸಿರುವನು.[24] ರಾಜಾ ಮದಕರಿಯೂ ಈ ಪದ್ಧತಿಯನ್ನೇ ಅನುಸರಿಸಿರುವನೆಂದು ತಿಳಿಯಬಹುದು.

ಶಾಸನದಲ್ಲಿ ಹೇಳಿರುವ 'ಹಿರಿಯೂರು ಸೀಮೆ'ಯು (ಒಂದನೆಯ) ಕಸ್ತೂರಿ ರಂಗಪ್ಪನಾಯಕನ ಕಾಲದಿಂದಲೇ ಚಿತ್ರದುರ್ಗ ಸಂಸ್ಥಾನಕ್ಕೆ ಸೇರಿದ್ದಿತೆಂಬುದಕ್ಕೆ ಚರಿತ್ರೆಯಲ್ಲಿ ಸೂಚನೆಯಿದೆ. ಹಿರಿಯ ಮದಕರಿಯು ಆಳಿದ ಸೀಮೆ ಗಳಲ್ಲಿ ಇದೂ ಒಂದಾಗಿದ್ದಿತು. ರಾಜಾ ಮದಕರಿಯ ಕಾಲಕ್ಕೂ ಅದು ಚಿತ್ರದುರ್ಗದ ಒಂದು ಭಾಗವಾಗಿಯೇ ಮುಂದುವರೆಯಿತು. ಆದ್ದರಿಂದಲೇ ಶಾಸನದಲ್ಲಿ 'ನಾವಾಳುವಂತ್ತ ರಾಜ್ಯ ಹಿರ್ರಿಯೂರ ಸೀಮೆಯೊಳಗಣ ಗಉಡನಹಳಿ(೨) ಗಾ(೦)ಮು' ಎಂದು ಪ್ರಸ್ತಾಪಿಸ ಲಾಗಿದೆ.

---

20. ಇಲ್ಲಿಗೆ ಸುಮಾರು ೫-೬ ವರುಷಗಳ ಹಿಂದೆ ಬೆಂಕಿಯ ಆಕಸ್ಮಿಕಕ್ಕೆ ಒಳಗಾಗಿ ಈ ಕಲ್ಲು ಎರಡಾಗಿ ಸಿಡಿದಿದೆಯೆಂದು ಸ್ಥಳೀಯರು ಕಾರಣ ಕೊಡುತ್ತಾರೆ. ಮತ್ತೊಂದು ಅಕ್ಷರಕಲ್ಲು ಈ ಊರಿನ ಸಮೀಪದ ಕೆರೆಯ ಬಳಿ ಇದ್ದಿತೆಂದೂ ಅದರಲ್ಲಿ 'ರಂಗಪ್ಪ ನಾಯಕ'ನ ಹೆಸರು ಕಂಡುಬರುತ್ತಿದ್ದಿತೆಂದೂ ಹೇಳುವರು. ಆ ಕಲ್ಲನ್ನು ಶೋಧಿಸಲೆತ್ನಿಸಿದರೂ ಅದು ಕಂಡುಬರಲಿಲ್ಲ.

21. *M.A.R.*, 1947–56, pp. 64-66

22. ನೋಡಿ: ಶ್ರೀಮಜ್ಜಗದ್ಗುರು ಶ್ರೀ ಕೂಡ್ಲೀ-ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ, ಭಾಗ ೧, ಶ್ರೀ ಕೂಡಲೀ ಕ್ಷೇತ್ರ (ಶಿವಮೊಗ್ಗ ಜಿಲ್ಲೆ), ೧೯೬೫: ದಾನಶಾಸನ, ಲೇಖನಗಳ ಕ್ರ.ಸಂ. ೧೦೮ ರಿಂದ ೧೧೨, ೧೧೯ ರಿಂದ ೧೨೧, ಪು. ೭೭-೮೦, ೮೨-೮೪

23. ನೋಡಿ: *E.C.*, Vol. XI, Dg. 131 (1708 A.D.), 130 (1711 A.D.), Jl. 17 (1715 A.D.), Dg. 147 (1716 A.D.), Cd. 56 (1718 A.D.), Dg. 16 (1719 A.D.), ಇತ್ಯಾದಿ

24. *Ibid.*, Dg. 157 (1728 A.D.), Jl. 46 (1733 A.D.), etc.

ಗೌಡನಹಳ್ಳಿಯು ವಿಜಯನಗರದ ಆಳ್ವಿಕೆಯಲ್ಲಿಯೂ 'ಹಿರಿಯೂರು ಸ್ತಳ'ಕ್ಕೆ ಸೇರಿದ್ದಿತೆಂದು ಕ್ರಿ. ಶ. ೧೫೮೯ ರಲ್ಲಿ ವೆಂಕಟಪತಿರಾಯನು ಕೊಟ್ಟ (ಮಸ್ಕಲ್ಲು ಗ್ರಾಮದಲ್ಲಿ ದೊರೆತ) ತಾಮ್ರಪಟ (ದಾನ) ಶಾಸನದಿಂದ ತಿಳಿದುಬರುತ್ತದೆ.[25] 'ನಂಮ ರಾಜ್ಯದ ಆಸ್ಥಾನಕ್ಕೆ ನಡೆದಂಥ ಹಿರಿಯೂರ ಸ್ಥಳಾಂತ್ರ'ಗಳೆಂದು ಉಲ್ಲೇಖಿಸಿ, ಆ ಸ್ಥಳಕ್ಕೆ ಸೇರಿದ ಬಗ್ಗನಡು, ಹೊಸೂರು, ಗೌಡನ(ಗವುಡನ)ಹಳ್ಳಿ, ಕುರುಬರಹಳ್ಳಿ, ಲಕ್ಕಿಹಳ್ಳಿ, ಬಸಾಪಟ್ಟಣ, ಆರಳಿಹಳ್ಳಿ, ತವನಿಧಿ, ಬುಕ್ಕಾಪಟ್ಟಣ, ಇ(ಯಿ)ಕ್ಕನೂರು ಸ್ಥಳಗಳನ್ನು ಪ್ರಸ್ತಾಪಿಸಿದೆ. ಪ್ರತಿಯೊಂದು ಸ್ಥಳದ ವ್ಯಾಪ್ತಿಗೊಳಪಟ್ಟಿದ್ದ ಗ್ರಾಮಗಳ ಸಂಖ್ಯೆಯನ್ನು ಹೇಳುವಾಗ, 'ಗವುಡನಹಳ್ಳಿ ಸ್ಥಳ ೧ಕ್ಕೆ ಗ್ರಾಮ ೧೦' ಎಂದು ಸೂಚಿಸಿದೆ. ಈ ಎಲ್ಲ ಸ್ಥಳಗಳಿಗೆ ಸಲ್ಲುವ ಮಾನ್ಯದ ಗದ್ದೆಗಳ ವಿವರವನ್ನು ನೀಡುವುದರೊಂದಿಗೆ 'ಗವುಡನಹಳ್ಳಿ ಕೆರೇ ಕೆಳಗೆ ಖ ೦।೦' ಎಂದಿರುವುದರಿಂದ, ಈಗ ಗೌಡನಹಳ್ಳಿಯ ಎಲ್ಲೆಯಲ್ಲಿ ಬರುವ ಕೆರೆಯು ಆಗಾಗಲೇ ನಿರ್ಮಾಣಗೊಂಡಿದ್ದಿತು. ಒಟ್ಟಿನಲ್ಲಿ, ಗೌಡನಹಳ್ಳಿಯು ಹಿಂದಿನಿಂದಲೂ ಹಿರಿಯೂರು ಸ್ಥಳ (ಅಥವಾ ಸೀಮೆ)ಗೆ ಸೇರಿದ್ದು, ಆಡಳಿತದ ವಿಭಾಗಕ್ಕೊಳಪಟ್ಟ ಪ್ರಮುಖ ಗ್ರಾಮಗಳಲ್ಲಿ ಒಂದಾಗಿದ್ದಿತೆನ್ನುವುದು ಇಲ್ಲಿ ವ್ಯಕ್ತಪಡುತ್ತದೆ.

ಚಿತ್ರದುರ್ಗ ಸಂಸ್ಥಾನವನ್ನು ಮೊದಲನೆಯ ಅರಸನಿಂದ (ಎರಡನೆಯ) ಕಸ್ತೂರಿ ರಂಗಪ್ಪನಾಯಕನವರೆಗೆ ಆಳಿದವರೆಲ್ಲರೂ 'ಶ್ರೀಮನ್ಮಹಾನಾಯಕಾಚಾರ್ಯ' ಎಂದೇ ಕರೆದುಕೊಂಡಿದ್ದರೆ, ಈ ಮದಕರಿಯು ತನ್ನನ್ನು 'ರಾಜಾ' ಎಂದು ಹೇಳಿಕೊಂಡಿದ್ದಾನೆ. ತಾನು ನೀಡಿದ ಶಾಸನ, ನಿರೂಪ, ವ್ಯವಹಾರಗಳಲ್ಲಿ ಹಾಗೆಂದೇ ಕರೆಯಿಸಿಕೊಂಡಿದ್ದಾನೆ. ಬಹುಶಃ ಈತನು ಅಧಿಕಾರಕ್ಕೆ ಬರುವ ವೇಳೆಗೆ ದುರ್ಗದ ಸಂಸ್ಥಾನವು ದಕ್ಷಿಣಭಾರತದ ರಾಜಕೀಯ ಆಗು–ಹೋಗುಗಳಲ್ಲಿ ಪಡೆದುಕೊಂಡಿದ್ದ ಪ್ರಾಮುಖ್ಯತೆಯು ಕಾರಣವಿರಬಹುದು ; ಬಲಿಷ್ಠ ಸಂಸ್ಥಾನಗಳಲ್ಲಿ ದುರ್ಗವು ಒಂದಾಗಿದ್ದುದೂ ಇದಕ್ಕೆ ಪ್ರೇರಣೆ ನೀಡಿರಬಹುದು ; ಸಮಕಾಲೀನ ಸಂಸ್ಥಾನಿಕರಲ್ಲಿ ಕೆಲವರು ಧರಿಸುತ್ತಿದ್ದ ಇಂತಹ ಅಭಿಧಾನವೂ ಈ ಹಿನ್ನೆಲೆಯಲ್ಲಿ ಪ್ರಭಾವ ಬೀರಿರಬಹುದು.

ಈ ಶಾಸನದಲ್ಲಿ 'ಮಾತೋಶ್ರೀ ಓಬಮ್ಮನಾಗತಿಯವರ' ಎಂಬುದನ್ನು 'ಮಾ॥ ॥ಯವರ' ಎಂದಷ್ಟೆ ತೋರಿಸಿದೆ. ಕೆಲವೊಮ್ಮೆ ಈ ನಾಯಕರು ಸಂಬಂಧಿಸಿದವರ, ಅಂದರೆ ಅರಸರು, ಧರ್ಮಪೀಠಾಧಿಕಾರಿಗಳು ಮತ್ತಿತರ ಗೌರವಾನ್ವಿತರ ಹೆಸರುಗಳನ್ನು ಪೂರ್ತ ಪ್ರಸ್ತಾಪಿಸದೆ, ತಮ್ಮ ಪತ್ರವ್ಯವಹಾರ, ನಿರೂಪ, ಶಾಸನ ಇತ್ಯಾದಿಗಳಲ್ಲಿ ಇದೇ ಕ್ರಮವನ್ನನುಸರಿಸಿದ್ದಾರೆ. 'ರಾ॥ ॥ಗಳು' ಅಥವಾ 'ರಾ।ಗಳು' ಎಂದು ಅರಸರುಗಳಿಗೂ 'ಶ್ರೀ। ಸ್ವಾಮಿಗಳವರು' ಅಥವಾ 'ಮ॥ ರಾ॥ ಗಳವರು' ಎಂದು ಮಠಾಧೀಶರುಗಳಿಗೂ ಸಂಬೋಧಿಸಿರುವುದುಂಟು. ಇತರ ಸಂಸ್ಥಾನಿಕರೂ ಇದೇ ಕ್ರಮವನ್ನು ಅನುಸರಿಸುತ್ತಿದ್ದರೆಂಬುದಕ್ಕೆ ಉದಾಹರಣೆಗಳಿವೆ.

ರಾಜಾ ಮದಕರಿಯು ಹಿರಿಯೂರಿನಲ್ಲಿ ಮಾಡಿಸಿದ 'ಅಂನಛತ್ರದ ಮಠ' ಯಾವುದೆಂಬುದಕ್ಕೆ ತಕ್ಕ ಸಮಾಧಾನ ನೀಡುವುದು ಸದ್ಯಕ್ಕೆ ಅಸಾಧ್ಯ. ಹಿರಿಯೂರಿನ ವಿವಿಧ ಸ್ಥಳಗಳನ್ನು, ಮಠಗಳನ್ನು ಈ ಸಂಬಂಧದಲ್ಲಿ ಅನ್ವಯಿಸಿ ಊಹಿಸಲಾಗುತ್ತದೆ. ಈ ಮಠದ ಕಟ್ಟಡವು ಈಗ ಅಸ್ತಿತ್ವದಲ್ಲಿಲ್ಲವೆಂತಲೂ ಸುಮಾರು ೧೯೧೮-೧೯ರ ವರೆಗೆ ಈ ಮಠದ ಸ್ಮಾರಕವು ಉಳಿದಿದ್ದಿತೆಂತಲೂ ಈ ಜಾಗವನ್ನು 'Kitchen' ಎನ್ನುತ್ತಿದ್ದರೆಂತಲೂ ಹೇಳಲಾಗುತ್ತದೆ.[26] ಇದೊಂದು ಪರಿಶೋಧಿಸಬೇಕಾದ ವಿಷಯ ಎನ್ನಬಹುದು.

ಪ್ರಸ್ತುತ ಗೌಡನಹಳ್ಳಿ ಶಾಸನದ ಮರು ಪರಿಶೀಲನೆಯಲ್ಲಿ, ಲೂಯಿ ರೈಸ್ ಅವರು ಪ್ರಕಟಿಸಿರುವ ಪಾಠಕ್ಕೂ

---

25. *Ibid.*, Hr. 88 (1589 A.D.)

26. ಈ ಮಾಹಿತಿ ಒದಗಿಸಿದವರು ಹಿರಿಯೂರಿನ ವಯೋವೃದ್ಧರಾದ ಹೆಚ್. ಟಿ. ಮಹಲಿಂಗನಾಯಕ ಅವರು. ದಿನಾಂಕ ೧೩-೧೧-೮೭ ರಂದು ಈ ಮಠದ ಪರಿಶೋಧನೆಯ ನಿಮಿತ್ತ ಹಿರಿಯೂರಿನಲ್ಲಿದ್ದಾಗ ಅಲ್ಲಿಯ ಯಳನಾಡು ಅಂಜನಪ್ಪ ಮತ್ತಿತರರು ಜತೆಗಿದ್ದು ಸಹಕರಿಸಿರುತ್ತಾರೆ.

ಮರು ಓದಿಕೆಯಲ್ಲಿ ಪರಿಷ್ಕರಿಸಿರುವ ಪಾಠಕ್ಕೂ ಇರುವ ಕೆಲವು ಮುಖ್ಯ ವ್ಯತ್ಯಾಸಗಳನ್ನು ಇತರ ಸಾಮಾನ್ಯ ವ್ಯತ್ಯಾಸಗಳೊಡನೆ ಇಲ್ಲಿ ಕಾಣಿಸಿದೆ. ಶಾಸನ ಪಾಠದ ತಿದ್ದುಪಡಿಯ ಸಂಬಂಧದಲ್ಲಿ ಇಲ್ಲಿ ಪ್ರಸ್ತಾಪಿಸಬೇಕಾದ ಅಂಶಗಳೆಂದರೆ, ಈ ಶಾಸನವನ್ನು ಓದಿದವರು ಪಾಠವನ್ನು ಎಚ್ಚರಿಕೆಯಿಂದ ಗಮನಿಸುವಲ್ಲಿ, ಲಿಪಿಶೈಲಿ ಹಾಗೂ ವೈಶಿಷ್ಟ್ಯಗಳನ್ನು ಪರಿಗಣಿಸುವಲ್ಲಿ, ಕಾಲಮಾನದ ಕ್ರಮವನ್ನನುಸರಿಸಿದ ಸಾಮಾನ್ಯ ಸೂತ್ರವನ್ನು ಅನ್ವಯಿಸುವಲ್ಲಿ ಹಾಗೂ ಲಿಪಿಗಳ ಪರಸ್ಪರ ಹೋಲಿಕೆಯೊಡನೆ ಪರಿಶೀಲಿಸಿದ ಶುದ್ಧ ಪಾಠವನ್ನು ಕೊಡುವುದರೊಂದಿಗೆ ಚರಿತ್ರೆಗೆ ಪೂರಕವೆನಿಸುವ ನೈಜಾಂಶಗಳನ್ನು ಒದಗಿಸಲು ಪ್ರಯತ್ನಿಸುವಲ್ಲಿ ಇನ್ನಷ್ಟು ಶ್ರಮುವಹಿಸಬಹುದಿತ್ತು.[27] ಇಂತಹ ಲೋಪ ಉಂಟಾಗಲು ಶಾಸನ ಓದಿದವರು ಮಾತ್ರವಲ್ಲದೆ ಅದನ್ನು ಕಂಡರಿಸಿದವರೂ ಕಾರಣರಾಗಿದ್ದಾರೆನ್ನಬಹುದು. ಲಿಪಿಯ ಕಂಡರಣೆಯಲ್ಲಿ ಸಮಕಾಲೀನ ಲಿಪಿಶೈಲಿಯು ಚೆನ್ನಾಗಿ ಮೂಡಿ ಬಂದಿದೆಯಾದರೂ ಶಾಸನದಲ್ಲಿಯ 'ಶ' ಅಥವಾ 'ಶು' ಮತ್ತು 'ಬ' ಹಾಗೂ 'ವ' ಮತ್ತು 'ಪ' ಅಕ್ಷರಗಳಲ್ಲಿ ಕೊಂಚಮಟ್ಟಿನ ಹೋಲಿಕೆಯಿರುವುದರಿಂದ ಪಾಠವನ್ನು ತಪ್ಪಾಗಿ ಓದಿರುವ ಸಾಧ್ಯತೆಯನ್ನು ಒಪ್ಪಬೇಕಾಗುತ್ತದೆ. ಶಾಸನದ ಆರಂಭದಲ್ಲಿ ಬರುವ 'ನಮಸ್ತುಂಗ...' ಪದದಲ್ಲಿಯ 'ಮ' ಅಕ್ಷರವನ್ನು ೯ ನೆಯ ಸಾಲಿನ ಮೊದಲನೆಯ ಅಕ್ಷರ 'ಮಾ' (ಈಗಿನ ಓದಿಕೆ) ಯೊಡನೆ ಹೋಲಿಸಿ ನೋಡಬಹುದು. ನಾಲ್ಕನೆಯ ಸಾಲಿನ ಕೊನೆಯ ಅಕ್ಷರ 'ಬ' (=ಬಹುಳ) ವನ್ನು 'ಶು' (=ಶುಕ್ಲ) ಎಂದು ಓದಿರುವುದಕ್ಕೆ ಲಿಪಿ ಕಂಡರಣೆಯಲ್ಲಿಯ ವಿಲಕ್ಷಣತೆಯೇ ಕಾರಣ. ಹಾಗೆಯೇ 'ನಾ' ಎಂಬುದು ಇಲ್ಲಿ 'ಣ' ಆಗಿ ಕಂಡಿರುವುದಕ್ಕೂ ಇದೇ ಕಾರಣ. 'ಣ' ಲಿಪಿಯು ಶಾಸನದಲ್ಲಿ ಈಗ ಉಳಿದುಕೊಂಡಿರುವ ಪಾಠದ ಯಾವ ಸಾಲಿನಲ್ಲಿಯೂ ಸೇರಿಲ್ಲವಾದ್ದರಿಂದ, ಈ ನಾಯಕರ ಇತರ ಶಾಸನಗಳಲ್ಲಿಯ ಈ ಲಿಪಿಯೊಡನೆ ಹೋಲಿಸಿ ನೋಡಬಹುದು. ಇಲ್ಲಿಯ 'ನಾ' ಲಿಪಿಯ 'ತಲೆಕಟ್ಟು' ಸಾಮಾನಾಂತರದಲ್ಲಿಲ್ಲದೆ ಕೊಂಚ ಕೆಳಕ್ಕೆ ಬಾಗಿರುವುದರಿಂದ ಅದನ್ನು 'ಣ' ಎಂದು ತಿಳಿಯಲು ಅವಕಾಶವಾಗಿದೆ. ಅಲ್ಲದೆ, ಶಾಸನ ಪಾಠದಲ್ಲಿ ಆಯಾ ಸಂದರ್ಭವನ್ನನುಸರಿಸಿ 'ನಾಯಕ' ಎಂದೇ ಕಂಡರಿಸಿರುವಾಗ ಹಾಗೂ ಹಾಗೆಯೇ ಓದಿರುವಾಗ 'ನಾಯಕ' ಎಂಬುದನ್ನು 'ಣಯಕ' ಎಂದು ಭಾವಿಸುವುದಕ್ಕೆ ಅವಕಾಶವೇ ಇಲ್ಲ. ಇದರೊಡನೆ ಸೇರಿಕೊಂಡಿರುವ 'ದುಗಪ' ಎಂಬುದು ಸಹ ಇದೇ ರೀತಿಯಲ್ಲಿಯೇ ರೂಪು ತಳೆದಿರುವಂತಹದು. 'ರ' ಅಕ್ಷರ ಮತ್ತು ಅದರೊಂದಿಗೆ ಸೇರಿರುವ 'ಂ' (ಸೊನ್ನೆ)—ಇವುಗಳನ್ನು ಲಿಪಿ ಕಂಡರಣೆಯಲ್ಲಿಯ ವ್ಯತ್ಯಾಸದಿಂದಾಗಿ 'ದ' ಮತ್ತು 'ು' (ಕೊಂಬು) (='ದು') ಎಂಬುದಾಗಿ ಭಾವಿಸುವುದರೊಡನೆ ಮೂಲ ನಾಮವನ್ನೆ ಮರೆಮಾಚುವಂತಾಯಿತು. ಚರಿತ್ರೆಯ ಶೋಧನೆಯಲ್ಲಿ ಇವುಗಳಿಂದ ಆಗಬಹುದಾದ ಪರಿಣಾಮಗಳು ತೀವ್ರವಾಗಿರುವಂತಹವು.

ಸದ್ಯಕ್ಕೆ ಲಭ್ಯವಿರುವ ಗೌಡನಹಳ್ಳಿ ಶಾಸನ ಪಾಠದ ಮೊದಲರ್ಧದಲ್ಲಿಯ ೧೦ ಸಾಲುಗಳನ್ನು ಮರು ಓದಿಕೆಯಿಂದ ವ್ಯಕ್ತಪಟ್ಟ ತಿದ್ದುಪಡಿಯೊಂದಿಗೆ ಈ ಕೆಳಗಿನಂತೆ ಕೊಟ್ಟಿದೆ :

(ಮುಂದಿನ ಪುಟ ನೋಡಿ)

---

27. ಈ ಶಾಸನ ಪಾಠದಲ್ಲಿ ತಪ್ಪಾಗಿ ಓದಲಾಗಿರುವ 'ಪೂತನಾಯರವರ' ಎಂಬುದನ್ನು ಇಂಗ್ಲಿಷ್‌ಗೆ ಲಿಪ್ಯಂತರಗೊಳಿಸುವಾಗ, ಇದನ್ನು ಕೈಬಿಟ್ಟು ಅನುಮಾನಾಸ್ಪದವೆನ್ನುವ ಹಾಗೆ ಆ ಜಾಗದಲ್ಲಿ ಕೇವಲ ಚುಕ್ಕೆಗಳನ್ನು ತೋರಿಸಿರುವುದರಿಂದ **('......vara')**, ಶಾಸನದ ನಕಲನ್ನು ಪ್ರತಿ ಮಾಡಿದವರಿಗೆ ಸಹ ತಮ್ಮ ಓದಿಕೆ ತೃಪ್ತಿಕರವಾಗಿಲ್ಲವೆಂದು ತೋರಿದ್ದಿರಬಹುದೆಂದು ಇದರಿಂದ ವ್ಯಕ್ತಪಡುತ್ತದೆ.

## ಗೌಡನಹಳ್ಳಿ ಶಾಸನದ ಪರಿಷ್ಕೃತ ಪಾಠ

೧. ನಮಸ್ತುಂಗ ಶಿರಶ್ಚುಂಬಿ । ಚೆಂದ್ರ ಚಾಮರ ಚಾರ
೨. ವೇ । ತ್ರೈಲೋಕ್ಯ ನಗರಾರಂಭ । ಮೂಲಸ್ತಂಭಾಯ ಶಂಭವೆ । ಸ್ವ
೩. ಸ್ತಿ ಶ್ರೀ ವಿಜೆಯಾಭ್ಯುದಯ ಶಾಲ್ಲಿವಾಹನ ಶಕ । ವರುಶಂ
೪. ಗಳು । ಸಾ ೧೬೭೮ ನೆಯ । ದಾತ್ರುನಾಮ ಸಂ । ವಯಿಶಾಕ ಬ
೫. ೧ ಸ್ತಿರವಾರದಲ್ಲು । ವಾಲ್ಮಿಕ ಗೊತ್ರದ ಸ್ರಿಮಂನ್ಮಾಹ
೬. ನಾಯಕಾಚಾರ್ಯ್ಯ । ಕಾಮಗೆತ್ತಿ । ಕಸುರ್ರಿ । ಮೆದಕೆರ್ರಿ ನಾ
೭. ಯಕರ । ಪಉತ್ರರಧಾ । ಕಸ್ತುರ್ರಿ ರಂಗಪನಾಯಕರ ।
೮. ಪುತ್ರರಾದ । ರಾಜಾ । ಮೆದಕೆರ್ರಿನಾಯಕ(ರವ)ರು ।
೯. ಮಾ॥ ॥ಯವರ ಹೆಸುರಲ್ಲು । ಹಿರಿಯೂ(ರಲ್ಲು) ಮಾಡಿ
೧೦. …….ತ್ರದ ಮಠಕೆ । ನಂಮ…….ಯರ್ರಿ
೧೧. …….. ………………..ಳು *

---

* ಈ ಶಾಸನದ ಅಧ್ಯಯನದ ಸಂಬಂಧದಲ್ಲಿ ಆಸಕ್ತಿ ತೋರಿ ನನ್ನನ್ನು ಉತ್ತೇಜಿಸಿದ ಚಿತ್ರದುರ್ಗದ ಎಚ್. ಶ್ರೀಶೈಲ ಆರಾಧ್ಯ, ಟಿ. ಎನ್. ಗಂಡುಗಲಿ, ಪಾಂಡವಪುರದ ನಾ. ಪ್ರಭಾಕರ್ ಹಾಗೂ ಅರೇಹಳ್ಳಿಹಟ್ಟಿಯ ಬಿ. ಎಸ್. ಶ್ರೀನಿವಾಸನಾಯಕ ಅವರುಗಳಿಗೆ ಕೃತಜ್ಞನಾಗಿದ್ದೇನೆ.